ಸ್ವರೂಪವೇ. ಪದಾರ್ಥ ತೋರುವಾಗ ಇತರ ವಿಲಕ್ಷಣವಾಗಿಯೇ ತೋರುವುದು. ಭೇದವು ಎಲ್ಲರ ಅನುಭವಕ್ಕೆ ಬಂದ ಮಾತು. ಯಾಕೆಂದರೆ ಎಲ್ಲರಿಗೂ 'ನಾನು ಸರ್ವೇಶ್ವರನು ನಿರ್ದುಃಖನು' ಎಂದು ಎಂದೂ ಅನುಭವ ಬಂದಿಲ್ಲ ಈ ಭೇದವು ಸತ್ಯವಾದುದು, ಮೋಕ್ಷದಲ್ಲಿಯೂ ಉಳಿಯುವುದೆಂದೂ ವೇದಗಳು ಹೇಳುತ್ತವೆ. ಎಲ್ಲಿಯಾದರೂ ಪರಮಾತ್ಮನೊಡನೆ ಐಕ್ಯವನ್ನು ಹೇಳಿದ್ದರೆ, ಅವರಿಬ್ಬರೂ ಒಂದೇ ಮನಸ್ಸಿನವರೆಂದಾಗಲೀ ಒಂದೇ ಸ್ಥಳದಲ್ಲಿರುವವರೆಂದಾಗಲೀ ಹೇಳಿದ ಮಾತು; ಒಂದೇ ಸ್ವರೂಪದವರೆಂದು ಹೇಳಿದ ಮಾತಲ್ಲ. 'ಅದ್ವೈತಂ ಪರಮಾರ್ಥತಃ' ಎಂದರೆ ಉತ್ತಮ ಪದಾರ್ಥವೆಂದರೆ ಅದೊಂದೇ ಎಂದು ಅರ್ಥವು.

ಈ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯೇ ಸ್ವತಂತ್ರ ತತ್ವವು, ಉಳಿದಿದ್ದು ಅಸ್ವತಂತ್ರ ತತ್ವವು. ಅದು ಎರಡು ವಿಧ:—ಒಂದು ಭಾವ ಇನ್ನೊಂದು ಅಭಾವ. ಅಭಾವವು, ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವವೆಂದು ಮೂರು ತರಹ. ಒಂದು ವಸ್ತುವು ಹುಟ್ಟುವ ಮೊದಲು ಇರುವ ಆ ವಸ್ತುವಿನ ಅಭಾವವು ಪ್ರಾಗಭಾವವು. ಅದು ನಷ್ಟವಾದಮೇಲೆ ಬರುವ ಅಭಾವವು ಅಪರ ಪ್ರಧ್ವಂಸಾಭಾವವು. ಯಾವಾಗಲೂ ಇಲ್ಲದಿರುವ ಮೊಲದ ಕೊಂಬಿನ ಅಭಾವವು, ಅತ್ಯಂತಾಭಾವವು. ಭಾವಪದಾರ್ಥವು ಚೇತನವೆಂದೂ ಅಚೇತನವೆಂದೂ ಎರಡು ತರಹ. ಚೇತನರಲ್ಲಿ ದುಃಖಲೇಪವಿಲ್ಲದವಳು ರಮಾದೇವಿಯು. ಉಳಿದ ಬ್ರಹ್ಮಾದಿಚೇತನಗಳೆಲ್ಲರೂ ದುಃಖ ಲೇಪವುಳ್ಳವರೇ, ಈ ಕಡೇವರ್ಗದವರು ದುಃಖದಿಂದ ಈಗ ಮುಕ್ತರು, ಈಗ ದುಃಖದಲ್ಲಿ ತೊಳಲಾಡುವವರು ಎಂದು ಎರಡು ತರಹ. ಈ ಕಡೇ ಜಾತಿಯವರಲ್ಲಿ ಕೆಲವರು ಮುಕ್ತಿಯನ್ನು ಹೊಂದುತ್ತಾರೆ. ಕೆಲವರು ಮುಕ್ತಿಗೆ ಅಯೋಗ್ಯರೇ ಇರುವರು. ಈ ಕಡೇ ಗುಂಪಿನವರು ತಮೋ ಯೋಗ್ಯರೂ ನಿತ್ಯ ಸಂಸಾರಿಗಳು. ಹೀಗೆ ಅಚೇತನಗಳಲ್ಲಿ ವೇದಗಳು ನಿತ್ಯ. ಪುರಾಣ, ಕಾಲ, ಜಡಪ್ರಕೃತಿ, ನಿತ್ಯಾನಿತ್ಯ. ಮಹತ್ತತ್ವ ಅಹಂಕಾರ ಮೊದಲಾದ ಇಪ್ಪತ್ತನಾಲ್ಕು ತತ್ವಗಳು ಅನಿತ್ಯವಾದವುಗಳು. ಪರತಂತ್ರವಾದ ಎಲ್ಲ ತತ್ವಗಳೂ ಪರಮಾತ್ಮನ ಅಧೀನವಾದವು. ಹೀಗೆ ತಿಳಿಯುವುದರಿಂದ ಮನುಷ್ಯನು ಮುಕ್ತನಾಗುತ್ತಾನೆ.

ಇದ್ದ ವಸ್ತುವನ್ನು ಇದ್ದಂತೆ ತಿಳಿಯುವುದಕ್ಕೆ ಯಥಾರ್ಥ ಜ್ಞಾನವೆನ್ನುವರು. ಕೆಂಪನ್ನು ನೋಡಿ ಬೆಳ್ಳಿ ಎಂದು ತಿಳಿಯುವುದು ವಿಪರೀತ ಜ್ಞಾನವು. ಇದು ಮನುಷ್ಯನೋ ಮರವೋ ಎಂಬ ನಿಶ್ಚಯವಿಲ್ಲದ ಜ್ಞಾನವು ಸಂಶಯವು.

ಈ ಯಥಾರ್ಥ ಜ್ಞಾನವು ನಾಲ್ಕು ತರಹದ್ದು. ಪರಮಾತ್ಮನ ಜ್ಞಾನವು ನಿತ್ಯವೂ ಸ್ವತಂತ್ರವೂ ಇರುವುದು. ಲಕ್ಷ್ಮೀ ಜ್ಞಾನವು, ಪರಮೇಶ್ವರನ ವಿಷಯದಲ್ಲಿ ಬ್ರಹ್ಮಾದಿಗಳಿಗಿಂತ ಹೆಚ್ಚು ಗ್ರಹಿಸಿದರೂ, ಎಲ್ಲವನ್ನೂ ಗ್ರಹಿಸಲಾರದು. ಮತ್ತು ಅವನ ಜ್ಞಾನದಷ್ಟು ಸ್ಪಷ್ಟವಲ್ಲ. ಯೋಗಿ ಜ್ಞಾನದಲ್ಲಿ ಋಜುಯೋಗಿಗಳ ಜ್ಞಾನವು ಅನಾದಿ ನಿತ್ಯವಾದುದು. ಇವರು ಆಲೋಚನೆ ಮಾಡಿ ಎಲ್ಲ ವಿಷಯಗಳನ್ನು ಗ್ರಹಿಸುವರು. ತಾತ್ವಿಕ ಯೋಗಿಗಳು ಆಲೋಚನೆ ಮಾಡಿದರೂ ಕಡಮೆ ತಿಳಿಯುವರು. ಅತಾತ್ವಿಕ ಯೋಗಿ ಜ್ಞಾನದಲ್ಲಿ ಸ್ವಲ್ಪ ಅಜ್ಞಾನವೂ ಕೂಡಿರುತ್ತದೆ. ಇನ್ನು ಅಯೋಗಿ ಜ್ಞಾನವು ಹುಟ್ಟುವುದು ಸಾಯುವುದು. ಜ್ಞಾನ ಸಾಧನಗಳು ಮೂರು:—ಪ್ರತ್ಯಕ್ಷ, ಅನುಮಾನ, ಆಗಮ.

ದೋಷಗಳಿಲ್ಲದ ವಸ್ತುವಿಗೂ ದೋಷಗಳಿಲ್ಲದ ಇಂದ್ರಿಯಕ್ಕೂ ಇರುವ ಸಂಬಂಧವು ಪ್ರತ್ಯಕ್ಷವೆನಿಸುವುದು. ಹೊಗೆಯನ್ನು ನೋಡಿ ಬೆಂಕಿಯಿದೆ ಎಂಬ ಕಲ್ಪನೆಯು ಹುಟ್ಟುವುದು. ಹೊಗೆಗೆ ಲಿಂಗವೆಂದು ಹೆಸರು. ಇಂತಹ ನಿರ್ದುಷ್ಟ ಲಿಂಗಕ್ಕೆ ಅನುಮಾನವೆಂದು ಹೆಸರು. ದೋಷರಹಿತವಾದ ವಾಕ್ಯಕ್ಕೆ ಅನುಮಾನವೆಂದು ಹೆಸರು.

ತತ್ವಜ್ಞಾನಕ್ಕೆ ಚರ್ಚೆಯು ಒಳ್ಳೇ ಅನುಕೂಲವಾದ ಸಾಧನವು. ಇದಕ್ಕೆ ಕಥೆಯೆಂದು ಹೆಸರು. ಆಚಾರ್ಯರು ಕಥಾ ಲಕ್ಷಣದಲ್ಲಿ ವಾದ ವಿವಾದ ಮಾಡುವ ರೀತಿಯನ್ನು ಹೇಳಿದ್ದಾರೆ. ಇದು ವಾದ, ಜಲ್ಪ,

ವಿತಂಡವೆಂದು ಮೂರು ತರಹದ್ದು. ಗುರು ಶಿಷ್ಯರಾಗಲೀ ಇತರ ಸಜ್ಜನರಾಗಲೀ ತತ್ವವನ್ನು ನಿರ್ಣಯಿಸು ವದರ ಸಲುವಾಗಿ ನಡೆಸತಕ್ಕ ಚರ್ಚೆಗೆ ವಾದವೆಂದು ಹೆಸರು. ಪ್ರಸಿದ್ಧಿಯ ಸಲುವಾಗಿ ಮಾಡತಕ್ಕ ಚರ್ಚೆಯು ಜಲ್ಪವು. ವಿತಂಡದಲ್ಲಿ ಸಜ್ಜನರೂ ಅಸಜ್ಜನರೂ ಕೂಡಿ ಚರ್ಚೆ ನಡೆಸುವದರಿಂದ ತಮ್ಮ ಮತವನ್ನು ಹೇಳದೇ ಪರಮಾತ್ಮನನ್ನು ಖಂಡಿಸುವರು.

ಪಕ್ಷಪಾತ ಬುದ್ಧಿಯಿಲ್ಲದವರು, ಸಿಟ್ಟು-ಸೆಡವು ಬಿಟ್ಟವರು, ಎಲ್ಲ ವಿದ್ಯೆಗಳನ್ನು ಬಲ್ಲವರು, ಸಭೆಯಲ್ಲಿ ಪ್ರಾಶ್ನಿಕರಾಗಬೇಕು. ಇವರು, ೩, ೫, ೭ ಹೀಗೆ ವಿಷಮ ಸಂಖ್ಯೆಯುವರಾಗಬೇಕು. ಇವರು ಪರಮಾತ್ಮನಲ್ಲಿ ಭಕ್ತಿಯುಳ್ಳವರಾಗಿರಬೇಕು. ಯಾವ ತರಹದ ಕಥೆಯನ್ನು ನಡೆಯಿಸಬೇಕು, ಯಾವಾಗ, ಎಲ್ಲಿ, ಯಾವ ವಿಷಯದಲ್ಲಿ ಮೊದಲಾದ ಪ್ರಶ್ನೆಗಳನ್ನು ನಿರ್ಣಯಿಸಿ ಜಯಾಪಜಯಗಳನ್ನು ನಿಶ್ಚಯಿಸುವದು ಪ್ರಾಶ್ನಿಕರ ಕೆಲಸವು.

ಈ ರೀತಿಯಾಗಿ ನಿಯಮಗಳ ಕಟ್ಟಿಗೆ ಒಪ್ಪಿಕೊಂಡು ವಿಮರ್ಶೆಮಾಡಿ, ತತ್ವವನ್ನು ಸಂಶಯದ ಹೊಗೆ ಯಿಂದ ದೂರಮಾಡಿ, ಅದರ ಮಹಾತ್ಮೆಯನ್ನು ಅರಿತು ಅದರಲ್ಲಿ ಸ್ನೇಹ ಬೆಳಸುವುದು ಮುಕ್ತಿಗೆ ಮುಖ್ಯ ಸಾಧನವಾಗಿರುವುದು. ವಿಶೇಷತಃ ಸಂಸಾರ ತಾಪತ್ರಯಗಳಿಂದ ಬಳಲುತ್ತಿರುವ ಜೀವನಿಗೆ ಕೃಷ್ಣಾಮೃತ ಮಹಾರ್ಣವವು ಶಾಂತಿಯನ್ನು ಕೊಡುವುದು. ಭಕ್ತಿಯು ಚತುರ್ವಿಧ ಪುರುಷಾರ್ಥಕ್ಕೂ ಸಾಧನೆಯು. ಪಾಪಿಯು ಪತಿತನು ಕೃತಕರ್ಮಕ್ಕೆ ಅನುತಾಪದಿಂದ ಹರಿಸ್ಮರಣೆಯನ್ನು ಮಾಡುವುದೇ ಯೋಗ್ಯ ಪ್ರಾಯ ಶ್ಚಿತ್ತವು. ಎಲ್ಲ ಶಾಸ್ತ್ರಗಳನ್ನು ಶೋಧಿಸಿ, ಪರಿಶೋಧಿಸಿ ಒಂದೇ ಒಂದು. ತತ್ವವು ನಿಷ್ಪನ್ನವಾಯಿತು. ಅದೆಂದರೆ ನಾರಾಯಣನನ್ನು ಧ್ಯಾನಮಾಡಬೇಕು. ಪರಮಾತ್ಮನು ಶಾಲಗ್ರಾಮದಲ್ಲಿ ಸನ್ನಿಹಿತನಾಗಿ ರುತ್ತಾನೆ. ಚಕ್ರಾಂಕಿತವು ಮೂರು ಯೋಜನ ಭೂಮಿಯನ್ನು ಶುದ್ಧಿಗೊಳಿಸುತ್ತದೆ. ಏಕಾದಶೀವ್ರತವು ಶ್ರೀಹರಿಗೆ ಅತ್ಯಂತ ಪ್ರಿಯಕರವಾದುದರಿಂದ ಎರಡು ಪಕ್ಷಗಳಲ್ಲಿ ಅದನ್ನು ಎಲ್ಲ ಜಾತಿಯವರೂ ಎಲ್ಲ ಆಶ್ರಮ ದವರೂ ಒಳ್ಳೇ ಶ್ರದ್ಧೆಯಿಂದ ಆಚರಿಸಬೇಕು. ಏಕಾದಶೀ ತಿಥಿಯಲ್ಲಿ ಭೋಜನ ಮಾಡುವವನು ಬ್ರಹ್ಮಹತ್ಯ ಗೋಹತ್ಯವನ್ನು ಮಾಡಿದಷ್ಟು ಪಾಪವನ್ನು ಹೊಂದುವನು. ಊರ್ಧ್ವಪುಂಡ್ರವನ್ನು ಧರಿಸದವನ ಮುಖವು ಸ್ಮಶಾನದಂತೆ ಅಮಂಗಲಕರವಾದದ್ದು. ಇದನ್ನು ಧರಿಸದ ಯಜ್ಞ, ದಾನ, ತಪಸ್ಸುಗಳು ವ್ಯರ್ಥವಾಗುವವು. ತಮ್ಮ ವಂಶದಲ್ಲಿ ವೈಷ್ಣವನು ಹುಟ್ಟಿದನೆಂದು ಪಿತೃಗಳು ಕುಣಿದಾಡುವರು.

ಜ್ಞಾನಿಯಾದವನು ನಿತ್ಯದಲ್ಲಿಯೂ ಹೀಗೆ ಉಕ್ತವಾದ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಮಾಡುತ್ತ ಹೋಗಬೇಕು. ಸದಾಚಾರ ಸ್ಮೃತಿಯಲ್ಲಿ ನಿತ್ಯಕರ್ಮವನ್ನು ಮಾಡುವ ಬಗೆಯನ್ನು ಹೇಳಿದ್ದಾರೆ. ಪರಮಾತ್ಮ ನನ್ನು ಸ್ಮರಿಸುತ್ತಾ ಹಾಸಿಗೆಯಿಂದೆದ್ದು, ದಂತಧಾವನ ಮೊದಲಾದ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ವಿಧಿಪೂರ್ವಕವಾಗಿ ಸ್ನಾನಮಾಡಬೇಕು. ವಸ್ತ್ರಗಳನ್ನು ಧರಿಸಿ ಸಂಧ್ಯಾವಂದನೆಯನ್ನು ಮಾಡಬೇಕು. ಹರಿ ಗುರುಗಳಿಗೆ ನಮಸ್ಕಾರಮಾಡಿ, ಧರ್ಮದಿಂದ ಪೂಜಾಪದಾರ್ಥಗಳನ್ನು ಸಂಪಾದಿಸಿ ಸ್ನಾನಮಾಡಿ ವಿಧಿ ಪೂರ್ವಕವಾಗಿ ಹರಿಯನ್ನು ಪೂಜಿಸಿ ವೈಶ್ವದೇವ ಬಲಿಹರಣಗಳನ್ನು ಮುಗಿಸಿ, ಎಲ್ಲವನ್ನೂ ಪರಮಾತ್ಮನಿಗೆ ಅರ್ಪಿಸಿ, ಪರಮಾತ್ಮನನ್ನು ಸ್ಮರಿಸುತ್ತಾ ಸಂತೋಷದಿಂದ ಊಟ ಮಾಡಬೇಕು. ವೇದ ಶಾಸ್ತ್ರಗಳನ್ನೋದುತ್ತ ಕಾಲ ಕಳೆದು ಸಾಯಂಸಂಧ್ಯೆಯನ್ನು ಹೀಗೆಯೇ ಮುಗಿಸಬೇಕು. ಭಕ್ತಿಯಿಂದ ಮಾಡಿದ್ದು ಧರ್ಮವು; ಭಕ್ತಿಯಿಲ್ಲದೇ ಮಾಡಿದ್ದು ಅಧರ್ಮವು. ಇದೇ ಸದಾಚಾರವು. ಎಲ್ಲ ವರ್ಣಾಶ್ರಮಿಗಳಿಗೆ ವಿಷ್ಣು ಒಬ್ಬನೇ ಪೂಜ್ಯನು. ರಮಾ ಬ್ರಹ್ಮಾದಿದೇವತೆಗಳನ್ನು ಅವನ ಪರಿವಾರವೆಂದು ಪೂಜಿಸಬೇಕು. ಯತಿಪ್ರಣವತಲ್ಪ ದಲ್ಲಿ ಸದ್ಗುರುವು ವಿರಕ್ತನಾದ ಶಿಷ್ಯನಿಗೆ ಹೇಗೆ ಉಪದೇಶ ಮಾಡಬೇಕು, ಪರಮಾತ್ಮನ ಮೂರ್ತಿಯನ್ನು ಹೇಗೆ ಚಿಂತಿಸಬೇಕು ಎಂಬದನ್ನು ಆಚಾರ್ಯರು ಹೇಳಿರುತ್ತಾರೆ. ನಾನೆಂದೂ ವಿಷ್ಣುವನ್ನೂ ವೈಷ್ಣವರನ್ನೂ ಬಿಡುವುದಿಲ್ಲೆಂದೂ, ಅವನಿಗೆ ಸಾಮ್ಯವನ್ನೂ ಐಕ್ಯವನ್ನೂ ಚಿಂತಿಸುವುದಿಲ್ಲೆಂದೂ ಪ್ರತಿಜ್ಞೆ ಮಾಡಬೇಕು. ಆಗ

ಗುರುವು ಅವನಿಗೆ ಸಚ್ಛಾಸ್ತ್ರವನ್ನು ಉಪದೇಶಿಸುವನು. ಆಮೇಲೆ ಪ್ರಣವ ಮಂತ್ರದ ಕ್ರಮವನ್ನು ಹೇಳಿ ಯಾವಾಗಲೂ ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದಿಸು ಎಂದು ಉಪದೇಶ ಮಾಡುವರು.

ಜಯಂತೀಕಲ್ಪದಲ್ಲಿ ಕೃಷ್ಣಾಷ್ಟಮಿ ದಿವಸ ಪರಮಾತ್ಮನ ಪ್ರೀತಿಯಾಗಬೇಕೆಂದು ಆ ದಿನವನ್ನು ಹೇಗೆ ಆಚರಿಸಬೇಕೆಂಬುದನ್ನು ಹೇಳುತ್ತಾರೆ. ಆ ದಿವಸ ಉಪವಾಸಮಾಡಿ ಯಥೋಕ್ತವಾಗಿ ನಿತ್ಯಕರ್ಮಗಳನ್ನು ಮಾಡಿಕೊಂಡು, ಕೃಷ್ಣ ಬಲರಾಮರನ್ನು ಪೂಜಿಸಬೇಕು. ಚಂದ್ರೋದಯವಾದಮೇಲೆ ವಿಧಿಪೂರ್ವಕವಾಗಿ ಪೂಜೆಮಾಡಿ ಅರ್ಘ್ಯವನ್ನು ಕೊಡಬೇಕು. ಆಮೇಲೆ ಉಕ್ತಕಾಲದಲ್ಲಿ ಪಾರಣೆ ಆಚರಿಸಬೇಕು.

ತಂತ್ರಸಾರದಲ್ಲಿಯೂ ಮೊದಲನೆ ಅಧ್ಯಾಯದಲ್ಲಿ ಪರಮಾತ್ಮನ ಪೂಜೆಯನ್ನೂ ಜಪವನ್ನೂ ಧ್ಯಾನವನ್ನೂ ವಿಧಿಪೂರ್ವಕವಾಗಿ ಹೇಳಿ ಪರಮಾತ್ಮನೇ ಎಲ್ಲ ದೇವತೆಗಳಲ್ಲಿ ಶ್ರೇಷ್ಠನೆಂಬ ಮಾತನ್ನು ಒತ್ತಿ ಹೇಳಿದ್ದಾರೆ. ಎರಡನೇ ಅಧ್ಯಾಯದಲ್ಲಿ ನ್ಯಾಸ ಪ್ರಾಣಾಯಾಮ ಮುಂತಾದ ಮಂತ್ರಾಂಗಗಳನ್ನು ಮಂತ್ರಸಿದ್ಧಿ ಪ್ರಕಾರವನ್ನು ನಿರೂಪಿಸಿದ್ದಾರೆ. ಮೂರನೇ ಅಧ್ಯಾಯದಲ್ಲಿ ಪರಮಾತ್ಮನ ಪ್ರತಿಮಾ ಪ್ರತಿಷ್ಠೆಯ ಪ್ರಕಾರವನ್ನೂ, ಅನ್ಯ ದೇವತೆಗಳನ್ನು ಪ್ರತಿಷ್ಠಾಪನೆ ಮಾಡಬೇಕಾದರೆ, ಅಂತರ್ಯಾಮಿಯಾಗಿ ಪರಮಾತ್ಮನನ್ನು ಚಿಂತಿಸಬೇಕೆಂದೂ ಹೇಳುತ್ತಾರೆ. ಒಟ್ಟಿಗೆ ಪರಮಾತ್ಮನ ಸ್ಮರಣೆಯಿಲ್ಲದ ಪೂಜೆಯು ಆಸುರೀ ಪೂಜೆಯೆಂದು ದೇವತೆಗಳು ಸ್ವೀಕರಿಸುವುದಿಲ್ಲೆಂಬ ಮಾತನ್ನು ಸ್ಪಷ್ಟವಾಗಿ ಹೇಳುತ್ತಾರೆ. ನಾಲ್ಕನೇ ಅಧ್ಯಾಯದಲ್ಲಿ ಮಂತ್ರಗಳ ಧ್ಯಾನಾದಿ ಕ್ರಮಗಳನ್ನೂ ಅವುಗಳ ಫಲಗಳನ್ನೂ ನಿರೂಪಿಸಿದ್ದಾರೆ. ಎಲ್ಲ ಮಂತ್ರಗಳೂ ಫಲಿಸಬೇಕಾದರೆ ಮುಖ್ಯವಾಗಿ ಪರಮಾತ್ಮನಲ್ಲಿ ಭಕ್ತಿ ಬೇಕು. ಗುರುವಿನ ಸ್ಮರಣೆ ಬೇಕೆಂದು ಹೇಳಿ ಧ್ಯಾನಪ್ರಕಾರವನ್ನು ನಿರೂಪಿಸುತ್ತಾರೆ. ಕೆಲವೊಂದು ರಹಸ್ಯಗಳನ್ನು ಗುರುಗಳಿಂದಲೇ ತಿಳಿದುಕೊಳ್ಳಬೇಕೆಂದು ಹೇಳುವುದಿಲ್ಲ. ಹೀಗೆ ಧ್ಯಾನದಿಂದಾಗಲೀ ಅಥವಾ ಸತತವಾಗಿ ಶಾಸ್ತ್ರ ವಿಮರ್ಶೆಯಿಂದಾಗಲೀ ಪರಮಾತ್ಮನ ಪ್ರಸಾದವು ದೊರೆಯುವುದು.

ಕೊನೆಗೆ ನರಸಿಂಹನಖ ಸ್ತೋತ್ರ, ಕೃಷ್ಣಗದ್ಯ, ದ್ವಾದಶ ಸ್ತೋತ್ರಗಳಲ್ಲಿ ಪರಮಾತ್ಮನನ್ನು ಆಚಾರ್ಯರು ಅನನ್ಯಭಾವದಿಂದ ಸ್ತುತಿಸಿ ತಮ್ಮ ಗ್ರಂಥಗಳನ್ನು ಮುಗಿಸುತ್ತಾರೆ.

ಹೇ ನರಸಿಂಹ! ನಿನ್ನ ಹಸನಾದ ನಖಗಳು ನಮ್ಮನ್ನು ರಕ್ಷಿಸಲಿ! ಬಲಿಷ್ಠರಾದ ದೈತ್ಯರನ್ನು ವಜ್ರವು ಪರ್ವತಗಳನ್ನು ಕತ್ತರಿಸುವಂತೆ, ಅವು ಸೀಳಿದವು. ಆ ದಪ್ಪನ್ನ ಉಗುರುಗಳು ವೈರಿಗಳನ್ನು ಹೊಡೆದೋಡಿಸಿ ಕತ್ತಲೆಯನ್ನು ಹರಿದುದರಿಂದ ಅವುಗಳನ್ನು ದೇವತೆಗಳು ಭಜಿಸುತ್ತಾರೆ. ಹೇ ಲಕ್ಷ್ಮೀಕಾಂತ! ಸುತ್ತಲು ನೋಡಿದರೂ ನಿನಗೆ ಸಮಾನರಾರೂ ಇಲ್ಲ. ಇನ್ನು ಉತ್ತಮ ವಸ್ತುವಿನ ಮಾತಂತೂ ದೂರವಾಯಿತು. ಯಾಕೆಂದರೆ ನಿನ್ನ ಸಿಟ್ಟಿನ ಕುಡಿಗಣ್ಣಿನಿಂದ ಹೊರಟ ದೇದೀಪ್ಯಮಾನವಾದ ಅಗ್ನಿಜ್ವಾಲೆಯು ಬ್ರಹ್ಮ ರುದ್ರೇಂದ್ರಾದಿಗಳನ್ನು ಭಸ್ಮಮಾಡಬಲ್ಲದು.

ನಿನ್ನದು ಆಕಾಶಗಂಗೆಯು ಮುದ್ದಿಟ್ಟ ಪಾದವು; ಶಕಟನನ್ನು ಚಟಚಟಿ ಮುರಿದು ಕಾಲಿಯ ನಾಗನ ವಿಷವನ್ನು ನಾಶಗೊಳಿಸಿದಿ. ಪ್ರಳಯದ ಮೋಡಗಳಂತೆ ಕಪ್ಪಾದ ಮೈ ನಿನ್ನದು. ನಿಶಿತವಾದ ಬಾಣಗಳಿಂದ ರಿಪುಗಳ ರಾಶಿಯನ್ನು ಕೆಡವಿದಿ. ವಾಯು, ಶೇಷ, ಗರುಡರಿಗೆ ಒಲಿದ ಮುರಾರಿಯು ನಮ್ಮನ್ನು ಯಾವಾಗಲೂ ಕಾಯಲಿ.

ಪರಮಾತ್ಮನ ಪಾದಕಮಲಗಳಿಂದ ಹಿಡಿದು ಮುಖಕಮಲದವರಿಗೆ ಎಲ್ಲ ಅವಯವಗಳೂ ವಿಶಿಷ್ಟ ಶೋಭೆಯಿಂದ ವಿಲಕ್ಷಣ ಮಹಾತ್ಮೆಯಿಂದ ಕೂಡಿರುವುವು. ಸಂತಸ ಚಿಂತಿಸುವವರಿಗೆ ಅವು ಅಂತವನ್ನು ತರುವುದಿಲ್ಲ.

ಸಜ್ಜನರೆಂಬ ಸಮುದ್ರಕ್ಕೆ ಪೂರ್ಣಚಂದ್ರನು ಇಂದಿರಾರಮಣನು; ಉನ್ಮತ್ತರಾದ ದುಷ್ಟರಿಗೆ ಕಾಲಾನಲನು ಎಲ್ಲವನ್ನೂ ಇವನು ಮಾಡಿದನು; ಇವನನ್ನು ಯಾರೂ ಮಾಡಿಲ್ಲ. ಈ ರಮಾಪತಿಗೆ ನನ್ನ ನಮಸ್ಕಾರ.

ನಿನಗಿಟ್ಟ ಕೆಲಸವನ್ನು ಹರಿಪಾದದಲ್ಲಿ ಮನವ ಹುದಗಿಸಿ ಮಾಡಿ ಊಟಮಾಡು. ಹರಿಯೇ ಪರನು; ಹರಿಯೇ ಗುರುವು, ಹರಿಯೇ ಜಗತ್ತಿಗೆ ತಂದೆ ತಾಯಿ. ಜಗತ್ತಿನಲ್ಲಿ ಈ ಪುರುಷೋತ್ತಮನಿಗಿಂತಲೂ ಪೂಜ್ಯನು ಯಾರೂ ಇಲ್ಲ. ಸಾಕಿನ್ನು ಸಂಸಾರದ ಚಿಂತೆಯು, ಹರಿಯ ಪಾದದಲ್ಲಿ ಮನವ ಹರಿಸು. ಸ್ತುತಿಯಲ್ಲಿ ಯತ್ನಿಸುವವನಿಗೂ ಗತಿಯುಂಟು. ಕೇಳಿರಿ; ಕೈಗಳೆರಡನ್ನೂ ಎತ್ತಿ ಶಪಥಮಾಡಿ ಹೇಳಿದ ತಿಳಿ ಮಾತನ್ನು; ಹರಿಗೆ ಸಮರೂ ಇಲ್ಲ, ಪರರೂ ಇಲ್ಲ.

ಶ್ರುತಿಗೆ ತಿಕ್ಕಿ ಹದನಾದ ಮನದಿಂದ ಕತ್ತಲೆಯನ್ನು ಹರಿದು, ಹರಿಯನ್ನು ಸೇರು. ಬಾಗಿದವರಿಗೆ ತನ್ನ ಪದವನ್ನು ಕೊಡುವನು, ಈ ಭಕ್ತ ಬಂಧುವು.

ಮತ್ಸನಾಗಿ ವೇದ ತಂದವನೇ, ಕೂರ್ಮನಾಗಿ ಮಂದರ ಪೊತ್ತವನೇ, ವರಾಹನಾಗಿ ಭೂಮಿಯ ಉದ್ಧರಿಸಿದವನೇ, ನರಹರಿಯಾಗಿ ಹಿರಣ್ಯಕನ ಹರಿದವನೇ, ವಟುವಾಗಿ ಬಲಿಯ ತುಳಿದವನೇ, ಕ್ಷತ್ರಿಯರನ್ನು ಕತ್ತರಿಸಿದ ಪರಶುರಾಮನೇ, ರಾಕ್ಷಸರ ಕೊಂದ ಮಾರುತಿಗೆ ಒಲಿದ ರಘುರಾಮನೇ, ಪಾಂಡವರನ್ನು ಕಾಯ್ದ ಪುಂಡರೀಕಾಕ್ಷ ಶ್ರೀಕೃಷ್ಣ, ದೈತ್ಯರನ್ನು ಮೋಹಿಸಿದ ಮನೋಹರ ಬುದ್ಧ, ದುಷ್ಟರನ್ನು ದಂಡಿಸಿದ ಕಲ್ಕಿಯೇ ನಿನಗೆ ದಂಡವತ್ ಪ್ರಣಾಮವು.

ಯಾರ ಕಡೆಗಣ್ಣಿನ ನೋಟದಿಂದ ಬ್ರಹ್ಮ ರುದ್ರೇಂದ್ರಾದಿದೇವತೆಗಳು ಬಲವಂತರಾಗಿ ಜಗತ್ತಿನಲ್ಲಿ ಮೆರೆಯುವರೋ ಆ ಲಕ್ಷ್ಮೀದೇವಿಯು ಯಾರ ಕಕ್ಷಾಕ್ಷವನ್ನು ಅಪೇಕ್ಷಿಸುವಳೋ ಆ ಅಜಿತನಾದ ಅನಂತನಿಗೆ ನಮಸ್ಕಾರ.

ಅಜಾದಿ ಅಖಿಲ ವಿಶ್ವವನ್ನು ಪೋಷಿಸುವ, ನಿಜಭಕ್ತರ ದುಃಖಸಂತತಿಯನ್ನು ನಾಶಗೊಳಿಸುವ, ಅನ್ಯರಿಗೆ ನೀಗದೆಯಿದ್ದುದನ್ನು ನಿರ್ವಹಿಸುವ, ದೇವತಾಮಂಡಲಕ್ಕೆ ಮಂಡನನಾದ ವಾಸುದೇವನನ್ನು ಸಂತೋಷಗೊಳಿಸೋಣ.

ಹೀಗೆ ಆನಂದತೀರ್ಥರೆಂಬ ನರಸಿಂಹನು ಮಾಯಾವಾದಿಗಳೆಂಬ ದೈತ್ಯರನ್ನು ಯುಕ್ತಿಗಳೆಂಬ ಉಗುರುಗಳಿಂದ ಹರಿದನು. ಅವನಿಗೆ ಎದರು ನಿಲ್ಲುವವರು ಯಾರೂ ಇಲ್ಲ.

ಓಡಿರಿ, ಓಡಿರಿ. ಮಾಯಿಗಳೇ ಬೇಗನೆ ಗುಹೆಗಳನ್ನು ಸೇರಿರಿ. ಕಮಲಾಕಾಂತನೆಂಬ ಆಕಾಶವನ್ನು ಆಶ್ರಯಿಸಿ. ಸರ್ವಜ್ಞರೆಂಬ ಸೂರ್ಯನು ಉದಯಿಸುತ್ತಾನೆ.



# ಶ್ರೀ ಹರಿಕಥಾಮೃತಸಾರ, ಸಾರಸಂಗ್ರಹ



ಲೇಖಕ :— ಹನುಮಂತರಾವ್ ಕುಲಕರ್ಣಿ, ಗೋರೇಬಾಳ, ಲಿಂಗಸೂಗೂರು.

---

**ಜಗದಂತಸ್ತಮಶ್ಛೇತ್ತಾ ವಿಕಸದ್ಜ್ಞಾನ ಚಂದ್ರಿಕಃ ।**
**ಹರಿಕಥಾಮೃತ ಸಾರಾಂಕೋ ಜಗನ್ನಾಥ ಗುರೂಡುಪಃ ॥**

ಶ್ರೀಹರಿಯು ಸರ್ವೋತ್ತಮನು, ಸರ್ವಜ್ಞನು, ಸಚ್ಚಿದಾನಂದವಿಗ್ರಹನು, ಜ್ಞಾನಾನಂದಾದ್ಯಖಿಲ ಕಲ್ಯಾಣಗುಣಪರಿಪೂರ್ಣನು, ನಿರ್ದೋಷನು, ಸರ್ವತಂತ್ರ ಸ್ವತಂತ್ರನು, ಸೃಷ್ಟ್ಯಾದ್ಯಷ್ಟಕರ್ತನು, ಸಮಸ್ತ ಮುಕ್ತಾಮುಕ್ತ ಜಗನ್ನಿಯಾಮಕನು, ಸನಾತನನು, ಪುರುಷರೂಪೀ, ಶ್ರೀಮನ್ನಾರಾಯಣನು, ಸಕಲಚೇತನಾ ಚೇತನರಿಗೆ ಮುಖ್ಯಬಿಂಬನು, ಈತನೇ ಕಾಲರೂಪೀ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಾದಿ, ಪಂಚ ವಿಶ್ವಾದಿ, ಅಷ್ಟ ಮತ್ಸ್ಯಾದಿ, ದಶ ಕೇಶವಾದಿ, ದ್ವಾದಶ ಚತುರ್ವಿಂಶತಿ, ಅಜಾದಿ ಏಕೋತ್ತರ ಪಂಚಾಶತ್, ಕಾಲಾದಿ ಷಷ್ಠಿ, ನಾರಾಯಣಾದಿ ಶತ, ವಿಶ್ವಾದಿ ಸಹಸ್ರ, ಅಜಿತಪರಾದಿ ಅನಂತರೂಪಾತ್ಮಕನು, ಸ್ವಗತಭೇದ ವಿವರ್ಜಿತನು, ಅಣು ಮಹದ್ರೂಪಿಯು, ಅನಂತವೇದ ಪ್ರತಿಪಾದ್ಯನು, ಪುರುಷಸ್ತ್ರೀರೂಪಿಯು, ಆನಂದ ವಿಜ್ಞಾನಮಯನು, ಚತುರ್ವಿಧ ನಾಶರಹಿತನು, ಸರ್ವದಾ ಶಶ್ವನೇಕ ಪ್ರಕಾರನಾಗಿರುವವನು, ಶ್ರೀ ರಮಾಬ್ರಹ್ಮಾದಿವಂದ್ಯನು, ತನ್ನ ಸತ್ಯಸಂಕಲ್ಪಾನುಸಾರ ಪ್ರತಿ ಬ್ರಹ್ಮಾಂಡದೊಳಗೆ ಹೊರಗೆ ಕ್ರೀಡಿಸುವವನು, ಕಾಲಕಾಲಕ್ಕೆ ಪ್ರಾದುರ್ಭೂತವಾಗುವ ಶ್ರೀಹರಿಯ ರೂಪಕ್ಕೆಲ್ಲಾ ಆತ್ಮಸೃಷ್ಟಿ ಎಂದು ಹೆಸರು. ಶ್ರೀಹರಿಯ ಅನಂತರೂಪಗಳು ಸಂಶ್ಲೇಷೈಕ್ಯದಿಂದಿರುವವು. ಈಶಕೋಟಿಪ್ರವಿಷ್ಟಳಾದ ಶ್ರೀ ಮಹಾಲಕ್ಷ್ಮೀದೇವಿಯು ಶ್ರೀಹರಿಯ ನಿಜಸತಿಯು, ನಿತ್ಯಾವಿಯೋಗಿನಿಯು, ನಿತ್ಯಮುಕ್ತಳು, ಶ್ರೀಹರಿಗೆ ದೇಶಕಾಲದಿಂದ ಸಮಳು. ಗುಣದಿಂದ ಅಸಮಳಾದ ಕಾರಣ ಸಮಾಸಮಳೆಂದು ವೇದಗಳು ಹೊಗಳುವುವು. ಸರ್ವದಾ ಶ್ರೀಹರಿಗೆ ಅಧೀನಳಾಗಿ ಶ್ರೀಹರಿಯ ಇಚ್ಛೆಯಂತೆ ಪ್ರವರ್ತಿಸುವವಳು, ಶ್ರೀ ಭೂ ದುರ್ಗಾದಿ ಅನಂತರೂಪಳು. ಹೇಗೆಹೇಗೆ ವಾಸುದೇವಾದಿ ಶ್ರೀಹರಿಯ ರೂಪಗಳು ಪ್ರಾದುರ್ಭೂತವಾದವೋ ಹಾಗೆಹಾಗೆ ಶ್ರೀ ರಮಾದೇವಿಯು ಶ್ರೀಹರಿಯ ಇಚ್ಛೆಯಂತೆ ಆತನ ಅಧೀನಳಾಗಿ ಮಾಯಾ ಜಯಾ ಕೃತಿ ಶಾಂತ್ಯಾದಿ ಅನಂತ ರೂಪಳು. ಇದು ಪರಾಧೀನಾವಾಪ್ತಿ ಸೃಷ್ಟಿಯೆನಿಸುವುದು. ಶ್ರೀ ರಮೆಯು ವೇದ, ದೇಶ, ಕಾಲ, ಪ್ರಕೃತಿ, ಕರ್ಮಜೀವರಿಗೆಲ್ಲಾ ಮುಖ್ಯಾಭಿಮಾನಿಯು. ಶ್ರೀ ರಮಾದೇವಿಗೆ ಶ್ರೀಹರಿಯೇ ಮುಖ್ಯ ಬಿಂಬನು. ಸ್ತ್ರೀರೂಪಿಯಾದ ವಿಜ್ಞಾನಮಯನೇ ಶ್ರೀ ಲಕ್ಷ್ಮಿಗೆ ಬಿಂಬನು. ಇದಕ್ಕೆ—

**ಶ್ರೀ ರಮಣಿ ಶ್ರೀವತ್ಸರೂಪಿಣಿ ಶ್ರೀವಕ್ಷಾತ್ಮನಾ ವಿದ್ಯಮಾನಾ ।**
**ನಾರಾಯಣೀ ರೂಪಮೇವ ಶ್ರೀ ರಿತ್ಯುಚ್ಯತೇ ॥**

ಎಂಬುದು ಪ್ರಮಾಣವು.

ಶ್ರೀ ಲಕ್ಷ್ಮೀನಾರಾಯಣರ ನಿತ್ಯ ಅಧೀನರಾದ ಜೀವರು, ವೇದಗಳು, ದೇಶ, (ಅವ್ಯಾಕೃತಾಕಾಶ), ಕಾಲ, ಜಡಪ್ರಕೃತಿ, ಅನಾದಿ ಕರ್ಮ ಇವು ಆರು ವಸ್ತುಗಳು ನಿತ್ಯವಾದವು. ಜೀವರು ಚಿದಾನಂದರು, ಶ್ರೀಹರಿಗೆ ಪ್ರತಿಬಿಂಬರು. ವೇದ. ದೇಶ, ಕಾಲ, ಪ್ರಕೃತಿ, ಕರ್ಮ ಇವು ಐದು ಜಡವಸ್ತುಗಳು. ಇವುಗಳಿಗೂ ಸಹ ಶ್ರೀಹರಿಯೇ ಮುಖ್ಯ ಬಿಂಬನು. ಜ್ಞಾನೇಚ್ಛಾರಹಿತವಾದ ಕ್ರಿಯಾಶಕ್ತಿಯನ್ನು ಪ್ರವರ್ತಿಸುವವನು.

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।**
**ಯದನುಗ್ರಹಃ ಸಂತಿ ನ ಸಂತಿ ಯದುಪೇಕ್ಷಯಾ ॥**

ಹೀಗೆ ಜೀವಾನಂತ್ಯ ದೇಶಾನಂತ್ಯ ಕಾಲಾನಂತ್ಯ ಕರ್ಮಾನಂತ್ಯ ಪ್ರಕೃತ್ಯನಂತ್ಯವಾಗಿರಲು ಶ್ರೀಹರಿಯ ಅನಂತರೂಪಗಳೇ ಮುಖ್ಯ ಕಾರಣ. ಇವೆಲ್ಲವುಗಳ ನಿಜಸ್ವರೂಪವನ್ನು ತಿಳಿಸಿ ಶ್ರೀ ಲಕ್ಷ್ಮೀನಾರಾಯಣ ಸ್ತೋತ್ರರೂಪವಾಗಿ ಪ್ರಕಟಿಸಲು ವೇದಾನಂತಗಳು ನಿತ್ಯವಾಗಿರುವುವು. ಅನಾದಿ ನಿತ್ಯರಾದ ಜೀವರಿಗೆ ಲಿಂಗದೇಹವನ್ನು ಉಪಚಯಮಾಡಿ ತದ್ವಾರಾ ಅವ್ಯಕ್ತ ಅನಿರುದ್ಧ ಪ್ರಾಕೃತ ಸ್ಥೂಲದೇಹಗಳನ್ನು ಕೊಡುವುದೇ ಮಿಶ್ರಸೃಷ್ಟಿ ಎಂದು ಹೇಳಲ್ಪಡುವುದು.

ಜೀವರು ಸಾಂಶರು, ನಿರಂಶರು, ಜಂಗಮ. ಸ್ಥಾವರ ಪ್ರಾಣಿಗಳು ಸ್ವಭಾವದಿಂದಲೇ ಸತ್ವರಜಸ್ತಮೋ ಜೀವಿಗಳು. ಜೀವನ ತ್ರೈವಿಧ್ಯ ನಿತ್ಯ, ಸತ್ವ ಜೀವರಲ್ಲಿ ಬ್ರಹ್ಮಾದಿ ತೃಣಾಂತ ದೇವ, ಋಷಿ, ಪಿತೃ, ಪ. (ರಾಜರು) ನರ ಹೀಗೆ ಪಂಚವಿಧ ಮುಕ್ತಿಯೋಗ್ಯರು ಸುಖಸ್ವರೂಪರೂ ಆನಂದಾನುಭವಿಗಳೂ ಆಗಿರುತ್ತಾರೆ.

ರಾಜಸ ಜೀವರಲ್ಲಿ ಸ್ವರ್ಗ ಪ್ರಚುರರು, ಭೂ ಪ್ರಚುರರು, ನಿರಯ ಪ್ರಚುರರೆಂದು ಮೂರು ವಿಧ. ನಿತ್ಯ ಸಂಸಾರಿಗಳು ಸುಖ ದುಃಖ ಮಿಶ್ರಸ್ವರೂಪವುಳ್ಳವರು. ತಮೋ ಜೀವರು ನರಾಧಮರು, ಪಿಶಾಚಿಗಳು, ರಾಕ್ಷಸ, ದೈತ್ಯರೆಂದು ನಾಲ್ಕು ವಿಧ. ಅವರು ದುಃಖ ಸ್ವರೂಪಿಗಳೂ. ದುಃಖಾನುಭವಿಗಳೂ, ನಿರಯ ಭಾಗಿಗಳೂ ಆಗಿದ್ದಾರೆ.

ಸಕಲ ಜೀವರು ಶ್ರೀಹರಿಗೆ ಪ್ರತಿಬಿಂಬರು, ಅತ್ಯಣುರೂಪರು, ಅಲ್ಪಜ್ಞರು, ಅಸ್ವತಂತ್ರರು, ಸರ್ವದಾ ಶ್ರೀಹರಿಯ ಅಧೀನರಾಗಿ ಅವ್ಯಾಕೃತಾವಸ್ಥೆಯಲ್ಲಿ ನಿತ್ಯರಾದವರು. ಅವರಿಗೆ ಅನಾದಿ ಅನಿತ್ಯವಾದ ಗೂಡಿ ನಂತಿರುವ ಜಡವಾದ ಲಿಂಗದೇಹವನ್ನು ವಾಸುದೇವೋದ್ಭೂತ ನಾರಾಯಣನು ತನ್ನ ಅಘಟಿತ ಮಹಿಮೆ ಯಿಂದ ಉಪಚಯ ಮಾಡಿ ಚೇತನ ರಾಶಿಗೆ ಆಯಾ ದೇಶ ಕಾಲಾನುಸಾರ ಅವರವರ ಸ್ವಭಾವಯೋಗ್ಯತೆಗೆ ಅನಾದಿ ಕರ್ಮಾನುಸಾರ ಸಂಬಂಧಪಡಿಸುವನು. ಇದನ್ನೇ ಜೀವರ ಮಿಶ್ರಸೃಷ್ಟಿ ಎಂದು ಕರೆಯುವರು. ಜೀವರು ಶ್ರೀಹರಿಗೆ ಪ್ರತಿಬಿಂಬರಾಗಿ ಅನಾದಿಕಾಲದಿಂದ ಅಧೀನರಾಗಿ ಇರುವರು. ದೇವರು ಜೀವರನ್ನು ಸೃಷ್ಟಿಮಾಡಿರುವುದಿಲ್ಲ. ಅನಾದಿ ಲಿಂಗ ದೇಹ ಉಪಚಯಮಾಡಿ ಸಾಧನಕ್ಕೋಸ್ಕರ ಮೇಲ್ಕಂಡ ದೇಹಗಳನ್ನು ಕೊಡುವವನಾದ ಕಾರಣ ಸಕಲ ಜೀವ ನಿರ್ಮಾಣನೆಂದು ಕರೆಯಲ್ಪಡುತ್ತಾನೆ ಎಂಬ ಶಾಸ್ತ್ರಕಾರರ ವಚನವು ನಿಜವಾದುದು. ಇಂತು ದೇಹಗಳನ್ನು ಕೊಟ್ಟು ಸಾಧನ ಮಾಡಿಸಿ ಸ್ವಪ್ರಸಾದದಿಂದ ತನ್ನ ನಿಜ ರೂಪವನ್ನು ತೋರಿಸಿ ಅವರವರ ಯೋಗ್ಯತೆಯಂತೆ ಗತಿ ಈಯುವನು.

ಜಡಪ್ರಕೃತಿ—ಪರಮಾಣುಗಳು ಅನಂತ. ಇವು ಸಹ ಸತ್ವ ರಜಸ್ತಮೋಗುಣಗಳಿಂದ ಕೂಡಿರುವುವು. ಇಂತಹ ಬಿಂದುಗಳ ಗುಣವೈಷಮ್ಯವೇ ಸೃಷ್ಟಿಯು. ಗುಣ ಸಾಮ್ಯವೇ ಲಯವು. ಈ ಜಡ ಪ್ರಕೃತಿಗೆ ಮುಖ್ಯಾಭಿಮಾನಿನಿಯು ಶ್ರೀ ರಮಾದೇವಿಯು. ಶ್ರೀ, ಭೂ, ದುರ್ಗಾದಿ ರೂಪಗಳಿಂದ ವಿರಾಜಿಸುವಳು. ಇದರಲ್ಲಿ ಪ್ರಾಕೃತ ವಿಕೃತ ವೈಕೃತವೆಂದು ಮೂರು ವಿಧವುಂಟು. ಬಹಿರ್ಬ್ರಹ್ಮಾಂಡ ಆವರಣ, ಲಿಂಗ ಪ್ರಕೃತಿ ಪ್ರಾಕೃತ. ಬ್ರಹ್ಮಾಂಡ ಖರ್ಪರ ವೈಕೃತ. ಬ್ರಹ್ಮಾಂಡದೊಳಗಿನ ವಸ್ತುಗಳೆಲ್ಲಾ ವಿಕೃತವೆಂದು ಕರೆಯಲ್ಪಡುವುವು. ಈ ಜಡಗಳಲ್ಲಿ ಪಂಚಭೂತ ಮಿಶ್ರಿತವಾಗಿ ಸತ್ವರಜಸ್ತಮೋ ವಿಭಾಗದಿಂದ ಪ್ರಾಮುಖ್ಯವಾಗಿ ಇಪ್ಪತ್ತನಾಲ್ಕು ತತ್ತ್ವಗಳು ಅಡಕವಾದವು ಉಪಚಯವಾಗಿ ಅಮಿಶ್ರತನದಿಂದ ಬಹಿರ್ಬ್ರಹ್ಮಾಂಡ ಸೃಷ್ಟಿಗೆ ಕಾರಣವು. ಈ ಜಡ ಸೃಷ್ಟಿಯನ್ನು ಕೇವಲ ಸೃಷ್ಟಿಯೆಂದು ಹೇಳುವರು. ಈ ಜಡಗಳಲ್ಲಿ ಅನುಭವ ಶಕ್ತಿ ಇಲ್ಲದ್ದರಿಂದ ತಾರತಮ್ಯವಿಲ್ಲ.

ಇನ್ನು ನಿತ್ಯವಾದ ವೇದಗಳಿಗೆ, ಅವ್ಯಾಕೃತಾಕಾಶ (ದೇಶ ಕಾಲಗಳಿಗೆ) ಸೃಷ್ಟಿ ಹೇಗೆಂದರೆ:—ವೇದಗಳಿಗೆ ಸ್ತೋತ್ರರೂಪವಾದ ಅಭಿವ್ಯಂಜಕ ಶಕ್ತಿ ಪರಮಾತ್ಮನ ಯೋಗ ನಿದ್ರಾಕಾಲದಲ್ಲಿ ಇರುವುದಿಲ್ಲ. ಶ್ರೀ ಹರಿಯು ಯೋಗನಿದ್ರೆಯಿಂದ ಎಚ್ಚತ್ತವನಂತೆ ನಟಿಸುತ್ತಾನೆ. ಆಗ ದುರ್ಗಾದೇವಿಯು ಆತನನ್ನು ಸೃಷ್ಟಿ ಮಾಡಲು ಪ್ರಾರ್ಥಿಸುತ್ತಾಳೆ. ಆಗ ಶ್ರೀ ರಮಾದೇವಿಯರ ಮೂಲಕ ವೇದಗಳಿಗೆ ಅಭಿವ್ಯಂಜಕ ಶಕ್ತಿಯನ್ನು ಕೊಡುತ್ತಾನೆ. ಇದೇ ವೇದಗಳ ಸೃಷ್ಟಿಯು. ಈ ವೇದಗಳು ದೇಶದಿಂದಲೂ ಕಾಲದಿಂದಲೂ ನಿತ್ಯವಾಗಿರುವುವು.

ಅವ್ಯಾಕೃತಾಕಾಶವು ವ್ಯಾಪ್ತವು ನಿತ್ಯವಾದುದು. ಅಂಡಾದಿ ಜಡ ಜೀವರುಗಳಿಗೆ ಸೃಷ್ಟಿಕಾಲದಲ್ಲಿ ಆಶ್ರಯವಾಗಿರುವುದು. ಈ ಆಶ್ರಯ ಶಕ್ತಿಯು ಪ್ರಳಯಕಾಲದಲ್ಲಿ ಕುಂಠಿತವಾಗುವುದು. ಈ ಆಶ್ರಯ ಶಕ್ತಿಯು ಕುಂಠಿತವಾದಕಾರಣ ಅವ್ಯಾಕೃತಾಕಾಶಕ್ಕೆ ಲಯವೆಂದು ಆಶ್ರಯಶಕ್ತಿಪ್ರದಾತೃತ್ವವು ಸೃಷ್ಟಿ ಎಂದು ಕರೆಸುವುದು.

ಮಹಾಕಾಲವು ನಿತ್ಯವಾಗಿ ದೇಶವಾದ ಅವ್ಯಾಕೃತಾಕಾಶದಲ್ಲಿ ಹೂವಿನಲ್ಲಿ ಪರಿಮಳವಿದ್ದಂತೆ ಇರುತ್ತದೆ. ಕಾಲಪ್ರದರ್ಶಕ ಶಕ್ತಿಯು ಕುಂಠಿತವಾಗುವುದೇ ಲಯವು, ಕಾಲನಿವರ್ತಕವು. ಕಾಲಪ್ರವರ್ತಕ ಶಕ್ತಿಯೇ ಸೃಷ್ಟಿಯು ಎಂದು ಪ್ರಕಾಶಸಂಹಿತೆಯಲ್ಲಿ ವಿಸ್ತಾರವಾಗಿ ಹೇಳಿದೆ. ಪ್ರಮಾಣಗಳು ಕೆಳಗೆ ಉದಾಹರಿಸಿವೆ. ಶ್ರೀಹರಿಯು, ಜೀವ, ಜಡಗಳಲ್ಲಿ ೧ ಶ್ರೀಹರಿಗೆ ಜೀವರಿಗೆ ಭೇದ. ೨ ಜೀವ ಜೀವರಿಗೆ ಭೇದ. ೩ ಶ್ರೀಹರಿಗೆ ಜಡಗಳಿಗೆ ಭೇದ. ೪ ಜೀವರು ಜಡಗಳಿಗೆ ಭೇದ. ೫ ಜಡ ಜಡಗಳಿಗೆ ಭೇದ. ಹೀಗೆ ಪಂಚ ಭೇದಗಳಿವೆ. ಶ್ರೀಹರಿ ಜೀವರಲ್ಲಿ ಅನಂತ ವಿಧ ತಾರತಮ್ಯವು ನಿತ್ಯವಾದುದು.

ಪ್ರಕಾಶಸಂಹಿತೆಯ ಪ್ರಥಮ ಪರಿಚ್ಛೇದ ಪ್ರಥಮಾಧ್ಯಾಯದಲ್ಲಿ ಹೀಗೆ ನಿರೂಪಿತವಾಗಿದೆ—

**ಸರ್ವ ಜೀವ ಸ್ವರೂಪಾಸ್ತ್ವಾ ಜ್ಞಾನವ್ಯಂಜನ ಶಕ್ತಯಃ ।**
**ಮನೋವೃತ್ತಿಜ್ಞನಿದಾನಃ ಶಕ್ತಯಸ್ತ್ರಿತಯೋಮತಾ ॥**
**ಲಯೇ ಜೀವಾದ್ಯಭಾವೇನ ಸಾ ಶಕ್ತಿಃ ಕುಂಠಿತಾ ಭವೇತ್ ।**
**ವ್ಯಾಪ್ತೇಶ್ವರ ಮತಸ್ಥಾನಾಂ ಶ್ರುತೀನಾಂ ತಾದೃಶೋಲಯಃ ॥**
**ಅಂಡಾದಿ ಜಡಜೀವಾನಾಂ ವ್ಯೋಮಾವ್ಯಾಕೃತ ಸಂಜ್ಞಕಂ ।**
**ಆಶ್ರಯಂ ಸೃಷ್ಟಿಕಾಲೇತು ಪ್ರಲಯೇ ಕುಂಠಿತಂ ಭವೇತ್ ॥**
**ದೇಶಸ್ಯಾವ್ಯಾಕೃತಾಸ್ಯಾಸ್ಯ ನಾಶ ಇತ್ಯುಚ್ಯತೇ ಲಯೇ ।**
**ಸಮಸ್ತಲಿಂಗದೇಹಾನಾಂ ತತ್ತತ್ಕಾರ್ಯಾನುಸಾರತಃ ॥**
**ನಾನಾಯೋನಿಪ್ರಾಪಿಕಾಸ್ತಿ ಶಕ್ತಿಃ ಸೃಷ್ಟೌ ಲಯೇ ನತು ।**
**ಸುಖ ದುಃಖ ಪ್ರದಾ ಶಕ್ತಿಃ ಸಮಸ್ತ ಕೃತಕರ್ಮಣಾಂ ॥**
**ಸೃಷ್ಟಾಲಯೇ ನಸಾ ವಿಷ್ಣೋ ರಾಜ್ಞಯಾ ಕುಂಠಿತಾ ಭವೇತ್ ।**
**ತಾದೃಶೋಹಿ ಲಯಸ್ತೇಷಾಂ ನ ಸರೂಪಲಯಃ ಸ್ಮೃತಃ ॥**
**ವರ್ಣೇಷು ಸರ್ವ ಭಾಷಾಭಿವ್ಯಂಜಕಾ ಶಕ್ತಿರಿಷ್ಯತೇ ।**
**ಸೃಷ್ಟೌ ನಸಾಸ್ತಿ ಪ್ರಲಯೇ ತೇಷಾಂ ನಾಶೋ ಹಿ ತಾದೃಶಃ ॥**
**ತಮಸ್ಥಾನಾಂ ಪೂರ್ವಕ್ಲೃಪ್ತದುಃಖಭೋಗೋ ಲಯಃ ಸ್ಮೃತಃ ।**
**ಪ್ರಕೃತ್ಯಾತ್ಮಕಲಿಂಗಸ್ಯ ಜಡಾಯಾಃ ಪ್ರಕೃತೇ ಸ್ತಥಾ ॥**

ಸೂಕ್ಷ್ಮಾಣಾಂ ಸ್ಥೂಲ ತತ್ತ್ವಾನಾಂ ತ್ರಿಗುಣಸ್ಯಾಪಿಕೃತ್ಸ್ನಶಃ ।
ಪ್ರಸ್ವೃಪ್ತಶಕ್ತಿಃ ಸೃಷ್ಟೌ ಹಿ ನ ಲಯೇ ಸಾ ತತೋಽಲಯಃ ॥
ಹಿತ್ವಾ ಜಗತ್ಸರ್ಜನಾದ್ಯಂ ಸರ್ವದಾ ಶ್ರೀಪತೌ ರತಿಃ ।
ಅತಿಸಾಮಿಪ್ಯಸೇವಾಹಿ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ ॥
ದೇಶತಃ ಕಾಲತೋ ವ್ಯಾಪ್ತೋ ದೇಶಕಾಲೋ ತಥಾಗಮಃ ।
ದೇಶತಃ ಕಾಲತೋ ವ್ಯಾಪ್ತಾಃ ವರ್ಣಾಃ ಸರ್ವೇಽಪಿ ಶಾಶ್ವತಾಃ ॥
ಜಡಾ ಚ ಪ್ರಕೃತಿರ್ನಿತ್ಯಾ ಜಡರೂಪಾಣುರೇವ ಚ ।
ದೇಶತಃ ಕಾಲತೋ ವ್ಯಾಪ್ತಾ ಚಿದ್ರೂಪಾ ಶ್ರೀಹರೇಃ ಸದಾ ॥
ಅನಂತ ಗುಣತೋ ನೀಚಾ ಗುಣತೋಽನಂತ ಈಶ್ವರೇ ।
ಲಯೇ ಸಮಾಶ್ರಿತಾ ಸರ್ವೇ ವಸಂತಿ ಕ್ಷೀಣ ಶಕ್ತಯಃ ॥
ಸಂಪೂರ್ಣ ಶಕ್ತ್ಯಾ ಭಗವತ್ಯನಂತೇ ದೇಶಕಾಲತಃ ।
ಪರಮಾಣುಮಿತಾನಂತಾನಂತರೂಪಸ್ಸದಾ ಹರಿಃ ॥
ತದಭಿನ್ನಾನಂತ ಸೂಕ್ಷ್ಮ ಸ್ಥೂಲರೂಪೋ ಹರಿಃ ಪರಃ ।
ಸಮಸ್ತ ಜೀವರೂಪೋರು ಸೂಕ್ಷ್ಮಸ್ಥೂಲ ಸ್ವರೂಪಕೇಃ ॥
ಸಮಸ್ತ ಜಡರೂಪಾನಂತಾನಂತರೂಪೋ ಜಗದ್ಗುರುಃ ।
ಅನಂತಾನಂತರೂಪೈರಪ್ಯಭಿನ್ನೋ ನಿರ್ಗುಣೋ ಹರಿಃ ॥
ಸರ್ವತಃ ಪಾಣಿಪಾದಾತ್ಮಾ ಸರ್ವತೋಽಕ್ಷಿ ಶಿರೋಮುಖಃ ।
ಸರ್ವತ್ರ ಸರ್ವೇಂದ್ರಿಯವಾನ್ ಸರ್ವಾನಾವೃತ್ಯ ತಿಷ್ಠತಿ ॥
ಅಪ್ರಾಕೃತೇಂದ್ರಿಯಾನಂತ ರೂಪಕಃ ಪರಮಾದ್ಭುತಃ ।
ಅಸಂಗ ಸರ್ವಗಶ್ಚೈವ ನಿರ್ಗುಣೋ ಗುಣಪೂರಿತಃ ॥

ಇತ್ಯಾದಿಯಾಗಿ ನಿರೂಪಿತವಾಗಿದೆ. ಹೀಗೆ ಸರ್ವಶಕ್ತಿಪ್ರದನಾದ ಸರ್ವತಂತ್ರ ಸ್ವತಂತ್ರನಾದ ಶ್ರೀಹರಿಯು ಪೂರ್ವದಲ್ಲಿ ಬ್ರಹ್ಮಮಾನದಿಂದ ಐವತ್ತುವರ್ಷ ಬಹಿರ್ಬ್ರಹ್ಮಾಂಡ ಸೃಷ್ಟಿ, ಮೂವತ್ತೇಳೂವರೆ ವರ್ಷದಲ್ಲಿ ಬ್ರಹ್ಮಾಂಡ ಸೃಷ್ಟಿ, ಸ್ಥಿತಿ, ಹೀಗೆ ಎಂಭತ್ತೇಳೂವರೆ ವರ್ಷದ ಕಡೆಯದಿವಸ ಹಗಲು ಉಳಿದಿರಲಾಗಿ

(೧) ಆ ಹಗಲಿನಲ್ಲಿಯೇ ನೂರುವರ್ಷ ಮನುಷ್ಯಮಾನದಿಂದ ಅನಾವೃಷ್ಟಿಯಿಂದ ಸರ್ವ ಪ್ರಾಣಿ ಕ್ಷಯವು,

(೨) ಮನುಷ್ಯಮಾನ ನೂರುವರ್ಷದಿಂದ ದ್ವಾದಶಾದಿತ್ಯರು ಅತಿ ಉಲ್ಬಣವಾದ ತೇಜಸ್ಸಿನಿಂದ ತಪಿಸಿ ಪಾತಾಳದಲ್ಲಿದ್ದ ಶೇಷಮುಖದಿಂದ ಸಂವೃತಾಗ್ನಿಯು ಹೊರಟು ಸಮಸ್ತರನ್ನೂ ದಹಿಸಲು,

(೩) ಮನುಷ್ಯಮಾನದಿಂದ ಶತ ವರ್ಷಪರ್ಯಂತ ಚಂಡವಾಯು ಬೀಸಿ ಸರ್ವವೂ ಶೋಷಿಸಲು,

(೪) ಮನುಜಮಾನ ನೂರು ವರ್ಷಪರ್ಯಂತ ಸಂವೃತ ಮೇಘಗಳು ಆನೆಯ ಸೊಂಡಲಿನಂತೆ ಘೋರಧಾರೆಯಿಂದ ಮಳೆಗರೆಯಲು ಸರ್ವವೂ ಲಯಹೊಂದಿ ಪಂಚಮಹಾಭೂತಗಳು ಇಪ್ಪತ್ತನಾಲ್ಕು ಜಡ ತತ್ವಗಳಲ್ಲಿ ಒಂದರಲ್ಲೊಂದು ಕ್ರಮೇಣ ಲಯಹೊಂದಿಸಿ ಸಮಸ್ತ ಜೀವರಾಶಿಗಳನ್ನು ಲಯವನ್ನೈದಿಸಿ

ಶ್ರೀಹರಿಯು ತನ್ನ ಉದರದ ನಾಭಿ ಊರ್ಧ್ವ, ನಾಭಿ ಸಮ, ನಾಭಿ ಅಧೋಭಾಗದಲ್ಲಿ ಕ್ರಮವಾಗಿ ಮುಕ್ತ, ಅಮುಕ್ತ, ದೈತ್ಯಾದಿಗಳನ್ನೈದಿಸಿ ಅಂದಿನ ರಾತ್ರಿ ಬ್ರಹ್ಮಮಾನದಿಂದ ಹತ್ತೂವರೆ ಘಂಟೆ ಯೋಗನಿದ್ರೆಯನ್ನು ತೋರುವ ಐವತ್ತು ಕೋಟಿ ಯೋಜನ, ಭೂರೂಪವಾದ ವಟದೆಲೆಯಲ್ಲಿ ಏಳುಕೋಟಿ ಯೋಜನ ಶಿಶುರೂಪ ದೇಹ ಧರಿಸಿದ ಶ್ರೀ ನಾರಾಯಣನು ಶಿಶುವಾಗಿ ತನ್ನ ಬಲಗಾಲು ಅಂಗುಷ್ಠವನ್ನು ತನ್ನ ಬಾಯೊಳಗೆ ಇಟ್ಟು ಕೊಂಡು ಚೀಪುತ್ತ ಹಿಂದಿನ ಅನಂತಾನಂತ ಬ್ರಹ್ಮಕಲ್ಪಗಳಲ್ಲಿ ಮುಕ್ತಬ್ರಹ್ಮಾದಿಗಳು ನಿರವಧಿಕ ಭಕ್ತ್ಯತಿಶಯದಿಂದ ಸೇವೆಯನ್ನು ಮಾಡಿ ತನ್ನ ಪಾದಗಳಿಗೆ ಅರ್ಪಿಸಿದ ಆ ಸೇವಾರೂಪ ರುಚಿಯನ್ನು ಜುರುಜುರನೇ ಮೆಲವುತ್ತಾನೆಂಬ ಊಹವನ್ನು ತೋರಿಸುತ್ತಾ ಯೋಗನಿದ್ರಾ ಮಾಡಿದನು. ಶ್ರೀಹರಿಗೆ ನಿದ್ರಾದಿಗಳಿಲ್ಲ. ಸಮಸ್ತ ಜೀವರ ನಿದ್ರೆಯೇ ದೇವರಿಗೆ ಯೋಗನಿದ್ರೆ ಎಂದು ಪ್ರಮಾಣವು. ಸಮಸ್ತ ಪ್ರಾಣಿಗಳು ಅತಿ ಸುಪ್ತರು. ನಿತ್ಯಸುಪ್ತಿ ವರ್ಜಿತನಾದ ದೀಪ್ತಮೂರ್ತಿಯ ಆಜ್ಞೆಯಿಂದ "ಪ್ರಲಯೇಪಿ ಪ್ರತಿಭಾತ ಪರಾವರಾ"ಎನ್ನುವಂತೆ ಸೂತ್ರನಾಮಕ ವಾಯುದೇವರು ಸಮಸ್ತರಲ್ಲಿಯೂ ಶ್ವಾಸಕಾರ್ಯವನ್ನು ಜಾಗ್ರತೆಯಿಂದ ಮಾಡಿಸುತ್ತಾರೆ.

ರಾತ್ರಿ ಹತ್ತೂವರೆ ಘಂಟೆ ಆದಮೇಲೆ ಬ್ರಾಹ್ಮೀಮುಹೂರ್ತದಲ್ಲಿ ಯೋಗನಿದ್ರೆಯಿಂದ ಎಚ್ಚೆತ್ತು "ಪ್ರಲಯಸ್ಯಾಷ್ಟಮೋಭಾಗ ಸ್ಸೃಷ್ಟಿಕಾಲ ಉದಾಹೃತಃ" ಎಂಬುವ ವಚನಾನುಸಾರ ಯೋಗನಿದ್ರೆಯಿಂದೆಚ್ಚೆತ್ತವನಂತೆ ತೋರ್ಪಡಿಸುತ್ತಾ ಶ್ರೀ ರಮಾ ವೇದಗಳಿಗೆ ಅಭಿವ್ಯಂಜಕಶಕ್ತಿಪ್ರದಾತೃವಾಗಿರಲು, ಓಂಕಾರದಿಂದ ಸಕಲ ವರ್ಣಗಳೂ ವೇದಗಳೂ ವ್ಯಕ್ತವಾಗಿವೆ. ಶ್ರೀ ಅಂಭ್ರಣಿಯು ಶೃತಿಗೀತೆಯಲ್ಲಿ ಹೇಳಿದಂತೆ ಶ್ರೀಹರಿಯನ್ನು ಪ್ರಾರ್ಥಿಸಲು ಶ್ರೀಹರಿಯು ನಾರಾಯಣೋದ್ಭೂತ ವಾಸುದೇವಾದಿ ಆತ್ಮಸೃಷ್ಟಿಯನ್ನೆಸಗಿ ಪಂಚರೂಪಗಳಿಂದ ಮುಕ್ತರ ಸೃಷ್ಟ್ಯಾದಿ ಅಷ್ಟಕರ್ತೃತ್ವಕ್ರೀಡಾ ಉಳಿದ ಹನ್ನೆರಡೂವರೆ ವರ್ಷಗಳವರೆಗೆ ಮಾಡಿ ಬ್ರಹ್ಮದೇವರ ನೂರುವರ್ಷ ಮುಗಿಯಲಿಕ್ಕೆ ಮುಕ್ತರಾಗುವ ಸಮಸ್ತ ಜೀವರನ್ನೂ ತನ್ನುದರದಿಂದ ಹೊರ ಹೊರಡಿಸಿ ರಮಾತ್ಮಕ ವಿರಜಾನದಿಯ ಸ್ನಾನಮಾಡಿಸಿ ತ್ಯಕ್ತಲಿಂಗರನ್ನಾಗಿ ಮಾಡಿ ಶ್ವೇತದ್ವೀಪಗತನಾದ ಶ್ರೀಮನ್ನಾರಾಯಣನ ಸಂದರ್ಶನಮಾಡಿಸಿ ಸಾತ್ವಿಕರಿಗೆ ದ್ವಿದಳಯುಕ್ತವಾದ ಮೋಕ್ಷಾನಂದಾವಿರ್ಭಾವವನ್ನೀಯುವನು. ರಜೋಜೀವರಿಗೆ ಶ್ರೀ ವಾಯುದೇವರ ಹುಂಕಾರದಿಂದ ಲಿಂಗಭಂಗಮಾಡಿಸಿ ಸುಖದುಃಖ ಮಿಶ್ರವಾದ ಸಾಂತಾನಿಕ ಲೋಕವನ್ನು ಕೊಡುವನು. ತಮೋಜೀವರಿಗೆ ವಾಯುಗದಾಪ್ರಹಾರದಿಂದ ಲಿಂಗ ಭಂಗಮಾಡಿಸಿ ನಿತ್ಯದುಃಖಮಯವಾದ ಶಾಶ್ವತ ಘೋರ ಅಂಧತಮಸ್ಸನ್ನು ಕೊಡುವನು. ಹೀಗೆ ಶ್ರೀಹರಿಯು ಸತ್ಯಸಂಕಲ್ಪಾನುಸಾರ ಹಿಂದಿನ ಬ್ರಹ್ಮಾಂಡ ಕಾರ್ಯವನ್ನು ಮುಗಿಸಿ ಪ್ರವಾಹತೋನಿತ್ಯವಾದ ಜಗದ್ರೂಪವಾದ ಬ್ರಹ್ಮಾಂಡಕಾರ್ಯವನ್ನು ಮಾಡಲು ಅನಾಯಾಸದಿಂದ ದ್ವಿತೀಯ ವ್ಯೂಹವಾದ ವಾಸುದೇವೋದ್ಭೂತ ನಾರಾಯಣಾದಿ, ಸಂಕರ್ಷಣೋದ್ಭೂತ ನಾರಾಯಣಾದಿ, ಪ್ರದ್ಯುಮ್ನೋದ್ಭೂತ, ಅನಿರುದ್ಧೋದ್ಭೂತ ಪಂಚಪಂಚರೂಪಗಳಿಂದ ಬ್ರಹ್ಮಾಂಡ ಸೃಷ್ಟಿ ಸ್ಥಿತಿ ಲಯ ಕಾರ್ಯವನ್ನು ಮಾಡುವನು.

**ಏಕಸ್ಮಿನ್ಪರಕಾಲೇತು ಏಕಮಂಡಂ ಜಗದ್ಗುರುಃ ।**
**ದಶಾವರಣ ಸಂಯುಕ್ತಂ ಸೃಜ್ಯತಿ ಹಂತ್ಯಜಃ ॥**
**ನೈಕದಾಜಾಂಡಬಹುಲಂ ಸ್ರಷ್ಟುಮಿಚ್ಛತಿ ಕೇಶವಃ ।**
**ಬ್ರಹ್ಮಾಣಂ ಗರುಡಂ ಶೇಷಂ ಇಂದ್ರಂ ಪ್ರಾಣಂ ರವಿಂ ಸುರಾ‌ನ್ ॥**
**ಏಕಮೇಕಂ ಹರಿರ್ಮುಕ್ತಂ ಪರಕಾಲೇ ಕರೋತ್ಯಜಃ ।**
**ತಥಾಪ್ಯ ಜಾಂಡಾಂನಂತಾನಾಂ ನಿಯಂತಾ ಜಾಂಡರೂಪವಾನ್ ॥**

ಒಂದು ಕಾಲದಲ್ಲಿ ಒಂದೇ ಬ್ರಹ್ಮಾಂಡವನ್ನು ಸೃಷ್ಟಿಸುವನೇ ವಿನಾ ಅನಂತ ಬ್ರಹ್ಮಾಂಡಗಳ ಸೃಷ್ಟಿ ಶಕ್ತಿ ಇದ್ದರೂ ತನ್ನ ಸತ್ಯಸಂಕಲ್ಪಾನುಸಾರ ಪ್ರವರ್ತಿಸುವನೆಂದು ಪ್ರಕಾಶಸಂಹಿತಾ ವಚನವಿದೆ. ಇದೇ ಶ್ರೀಹರಿಯ ಲೀಲೆಯು.

# ಶ್ರೀ ಹರಿಕಥಾಮೃತಸಾರ ಪೂರ್ವಪೀಠಿಕೆ

**ಇಂತಹ ಶ್ರೀ ಹರಿಕಥಾಮೃತಸಾರವು ಯುಗಾನುಸಾರ ಹೇಗೆ ಪ್ರವರ್ತಿಸಿತೆಂದರೆ :—**

ಈ ಶ್ರೀಹರಿಯ ಅನಂತ ಮಹಿಮಾ ಕೃತಯುಗದಲ್ಲಿ ಸತ್ವ ಜೀವರ ಪ್ರಾಚುರ್ಯವಿದ್ದಕಾರಣ ಅನಂತ ವೇದ ವಿಭಾಗಗಳಾದ ಋಗ್ಯಜುಸ್ಸಾಮಾಥರ್ವಾದಿಗಳಿಂದಲೂ ಮೂಲರಾಮಾಯಣ, ಪಂಚರಾತ್ರಾದ್ಯಾಗಮಗಳಿಂದ ಯೋಗ್ಯತಾನುಸಾರವಾಗಿ ಯಜಿಸಿದರು. ದ್ವಾಪರದಲ್ಲಿ ಜ್ಞಾನ ಕಡಿಮೆಯಾಗಲು ಶ್ರೀಹರಿಯು ವೇದವ್ಯಾಸರೂಪದಿಂದ ಅವತರಿಸಿ ಅನೇಕ ವೇದ ವಿಭಾಗಗಳನ್ನು ಪ್ರಾಚುರ್ಯದಿಂದ ವ್ಯಕ್ತಗೊಳಿಸಿ ಬ್ರಹ್ಮ ಸೂತ್ರ, ಅಷ್ಟಾದಶಪುರಾಣ, ಇತಿಹಾಸವಾದ ಮಹಾಭಾರತಾದಿ ನಾಲ್ಕು ಅಬ್ಜ ಮೂವತ್ತೆರಡು ಕೋಟಿ ಗ್ರಂಥಗಳನ್ನು ರಚಿಸಿ ತನ್ನ ಮಹಾಲೀಲೆಯನ್ನು ಕೊಂಡಾಡಿ ಸತ್ವಜೀವರಿಗೆ ಜ್ಞಾನದಾನವಿತ್ತು ಸಾಧನಮಾಡಿಸಿದನೆಂದು ಶ್ರೀ ವಿಜಯದಾಸಾರ್ಯರು ಗುರುಮಹಿಮೆ ಸುಳಾದಿಯಲ್ಲಿ ಕೊಂಡಾಡಿರುವರು. ಕಲಿಯುಗದಲ್ಲಿ ಜ್ಞಾನಮಯವಾದ ಸತ್ತತ್ತ್ವವೇ ಸಜ್ಜನರಿಗೆ ತೋರದಿರಲು ಅಖಿಲ ಖಳಕುಲ ಪ್ರಾಚುರ್ಯವಾಗಿ ಜೀವೇಶ್ವರರ ಐಕ್ಯ ಸಾಧಿಸಿ ಸತ್ತತ್ತ್ವವೇ ನಾಶಗೈಯಲು ಸಜ್ಜನರು ದುಃಖದಿಂದ ಬಳಲಿ ಶ್ರೀಹರಿಗೆ ಮೊರೆಯಿಡಲು ಶ್ರುತಿ ಪ್ರತಿಪಾದ್ಯರಾದ ಶ್ರೀ ವಾಯುದೇವರೇ ಭಗವದಾಜ್ಞೆ, ದೇವತೆಗಳ ಪ್ರಾರ್ಥನೆಯಂತೆ ತೃತೀಯರೂಪವಾದ ಶ್ರೀ ಮಧ್ವಾ ಶ್ರೀ ವ್ಯಾಸಪ್ರಣೀತ ಗ್ರಂಥಗಳ ಭಾವವನ್ನು, ಮೂಲ ಮೂವತ್ತೇಳು ಗ್ರಂಥಗಳನ್ನು ರಚಿಸಿ, ಶ್ರೀಹರಿಯು ಈಶ, ಅನಾದಿನಿತ್ಯನು. ಸಕಲ ಜೀವರು ಸದಾ ಈಶನ ದಾಸರೆಂದು ತೋರಿದರು. ತವರ್ಗದಲ್ಲಿ ಮೂರನೇ ಅಕ್ಷರವು (ದಾ) ಯವರ್ಗದಲ್ಲಿ ಏಳನೇ ಅಕ್ಷರವು (ಸ) ಹೀಗೆ ದಾಸಭಾವವನ್ನು ತೋರುವ ಮೂವತ್ತೇಳು ಗ್ರಂಥಗಳನ್ನು ರಚಿಸಿದರೆಂದು ಆರ್ಯರ ವಚನವಿದೆ. ಮತ್ತು ನಿತ್ಯ ದಾಸತ್ವವು ಜೀವರಲ್ಲಿ ನೆಲೆಗೊಂಡಿರಲು ಕಾರಣವಾದರೂ ದಾಸ ಎಂಬುವುದನ್ನು ಎಡದಿಂದ ಓದಲು ಸದಾ ನಿತ್ಯದಲ್ಲಿ ಜೀವರು ಹರಿದಾಸರು ಎಂದು ಸಹ ತೋರಿದ ಶ್ರೀ ಮಧ್ವಮುನಿಗಳೇ ಶ್ರೀ ದಾಸಸಂಪ್ರದಾಯಕ್ಕೆ ಮೂಲ ಪ್ರವರ್ತಕರು. "ಆನಂದತೀರ್ಥಾ"ಭಿಧಾನಾಂಕಿತದಿಂದ ಗಾಥಾರೂಪವಾಗಿ ಶ್ರೀಹರಿಯ ದ್ವಾದಶಸ್ತೋತ್ರ ಮಾಡಿರುವುದೇ ಸಾಕ್ಷಿ. ನಂತರ ಶ್ರೀಪದ್ಮನಾಭ, ನರಹರಿ, ಅಕ್ಷೋಭ್ಯ, ಮಾಧವತೀರ್ಥರು, ಶ್ರೀಮದಾಚಾರ್ಯರ ಸಚ್ಛಿಷ್ಯರುಗಳಾಗಿ ದಾಸ್ಯಭಾವವನ್ನು ಸ್ಥಿರವಾಗಿ ನೆಲೆಗೊಳಿಸಿದರು. ತರುವಾಯ ಶ್ರೀ ಜಯಮುನಿಗಳು ಶ್ರೀಮದಾಚಾರ್ಯರ ಗ್ರಂಥಗಳಿಗೆ ಟೀಕೆಯನ್ನು ಬರೆದರು. ಶ್ರೀಮದಾನಂದತೀರ್ಥರ ಪಟ್ಟದಾನೆ ಎಂಬ ಶ್ರೀ ವ್ಯಾಸರಾಜ ಸ್ವಾಮಿಗಳು ಶ್ರೀ ಸ್ವಾದೀಗುರುರಾಜ (ವಾದಿರಾಜರು) ಶ್ರೀಮನ್ಮಂತ್ರಾಲಯ ಪ್ರಭುಗಳಾದ ಅನೇಕ ದೇವಾಂಶರು ಭಗವದಾಜ್ಞೆಯಿಂದ ಅವತರಿಸಿ ಆ ಗ್ರಂಥಗಳಿಗೆ ಟಿಪ್ಪಣಿಗಳನ್ನು ರಚಿಸಿ ಸರಿಯಾದ ಭಾವವನ್ನು ಸತ್ವಜೀವರಿಗೆ ತೋರಿಸಿ ಶ್ರೀಹರಿಕಥಾಮೃತ ಸಾರಮಯ ಪೀಯೂಷವನ್ನೆರೆದರು. ಶ್ರೀ ನರಹರಿತೀರ್ಥರಾರಂಭಿಸಿ ಶ್ರೀಪಾದರಾಜರು, ಶ್ರೀ ವ್ಯಾಸಯೋಗಿಗಳು, ಶ್ರೀ ವಾದಿರಾಜರು ತಾವು ಸಂಸ್ಕೃತದಲ್ಲಿ ಅನೇಕ ಗ್ರಂಥ ರಚಿಸಿದ್ದಾಗ ಸಂಸ್ಕೃತ ಭಾಷೆಯನ್ನರಿಯದ ಸಜ್ಜನರುಗಳ ಉದ್ಧಾರಕ್ಕೋಸ್ಕರವಾಗಿ ಅಚ್ಚ ಕನ್ನಡವಾದ ಪ್ರಾಕೃತ ಭಾಷೆಯಲ್ಲಿ ಅನಂತ ವೇದಾರ್ಥಸಾರವನ್ನು ಹೇಳಿ, ಪ್ರತಿವರ್ಣಗಳು ಶ್ರೀಹರಿಯ ರೂಪಗಳು, ಆ ಪ್ರತಿವರ್ಣಗಳು, ಶಬ್ದಗಳು, ಪದರೂಪ, ಸುಳಾದಿರೂಪ, ಉಗಾಭೋಗ, ವೃತ್ತನಾಮಗಳನೇಕ ವಿಧವಾಗಿ ಹೇಳಿ, ವರ್ಣಗಳಲ್ಲಿ ಸರ್ವಭಾಷಾಭಿವ್ಯಂಜಕ ಶಕ್ತಿ ತೋರಿದ ಕರುಣಾಳುಗಳು. ಇವರ ತತ್ಪೂರ್ವದಲ್ಲಿ ಅರವತ್ತು ಜನ ಆದ್ಯರು ಹರಿದಾಸರಾಗಿ ಶ್ರೀಹರಿಕಥಾಮೃತಸಾರಮಯವಾದ ಅನೇಕ ಸುಳಾದಿ ಪದಾದಿಗಳನ್ನು ರಚಿಸಿದರು. ದೇವಾಂಶರಾದ ಶ್ರೀ ಪುರಂದರದಾಸರು ಅವರ ನಾಲ್ವರು ಸುತರು ಬೇಲಾಪುರ ವೈಕುಂಠ ದಾಸರು, ಶ್ರೀ ಕನಕದಾಸರು, ಶ್ರೀ ವ್ಯಾಸರಾಜರ ಶಿಷ್ಯರು, ಅವರ ಕಾಲದಲ್ಲಿಯೇ ಅಚ್ಚ ಕನ್ನಡಿಯಂತೆ ತೋರುವ ತಿಳಿಗನ್ನಡದಲ್ಲಿಯೇ ಸಕಲ ಉಪನಿಷತ್ಸಾರವನ್ನು ರಚಿಸಿ ಲೋಕೋದ್ಧಾರಗೈದರು. ಪುರಂದರ ಉಪನಿಷತ್ತೆಂದು ಶ್ರೀ ವ್ಯಾಸರಾಜರಿಂದ ಮಾನ್ಯವಾದುವು ತರುವಾಯ ಶ್ರೀ ವಿಜಯದಾಸರು, ಗೋಪಾಲ

ನಾಸರು, ಶ್ರೀ ಮೋಹನದಾಸರು, ಶ್ರೀ ವೇಣುಗೋಪಾಲಾದಿ ವಿಜಯರಾಯರ ಮೂವತ್ತು ಜನ ಶಿಷ್ಯರು. ಶ್ರೀ ಜಗನ್ನಾಥದಾಸರು ಅನೇಕ ವಿಧವಾಗಿ ಶ್ರೀಹರಿ ಲೀಲೆಯನ್ನು ಕನ್ನಡದಲ್ಲಿಯೇ ರಚಿಸಿರುವರಾದರೂ ಈ ಕನ್ನಡಪದ, ಸುಳಾದಿ, ಉಗಾಭೋಗ ವೃತ್ತನಾಮಗಳು ಲಕ್ಷಾವಧಿಗಳಾಗಿ ಶ್ರೀಹರಿಯಲ್ಲಿ ಲಕ್ಷ್ಯವಿಡಲು ಮಾರ್ಗಪ್ರದರ್ಶಕಗಳಾದರೂ ಸುಗಮವಾಗಿ ಅರ್ಥವಾಗಲಾರವು. ಮಂದಾಧಿಕಾರಿಗಳಾದ ಮೋಕ್ಷಯೋಗ್ಯರಿಗೆ ಧ್ಯಾನೋಪಾಸನದ ಬಗೆಯನ್ನು ತೋರಲು ಜೀವ ಅಪಾನಾವಿಷ್ಟ ಪ್ರಹ್ಲಾದಾನುಜರಾದ ಸಲ್ಹಾದಾಂಶ ಸಂಭೂತರಾದ ಶ್ರೀ ಜಗನ್ನಾಥದಾಸವರ್ಯರು, ಶ್ರೀ ವ್ಯಾಸರಾಜ, ಶ್ರೀ ಸ್ವಾದಿರಾಜ ವಿಠಲೋಪಾಸಕ ಶ್ರೀ ಪುರಂದರದಾಸರಾಯರು ದೇವಾಂಶರ ಅನುಗ್ರಹದಿಂದ ಶ್ರೀಗಾದಿರಾಜರ ಕೋಶಕ್ಕೊಪ್ಪುವ ಶ್ರೀಹರಿಕಥಾಮೃತ ಸಾರವನ್ನು ರಚಿಸಿದರು. ಶ್ರೀಹರಿಕಥಾಮೃತಸಾರ ಮಹಿಮೆಯನ್ನು ಶ್ರೀದವಿಠ್ಠಲರಾದ ಕರ್ಜಗಿ ದಾಸಪ್ಪ ದಾಸರು (ಫಲಶ್ರುತಿಪದ್ಯ ೬)—

**“ ಶ್ರುತಿಗೆ ಶೋಭನವಾಗದೊಡೆ ।**
**ಜಡಮತಿಗೆ ಮಂಗಳವೀಯದೊಡೆ ।**
**ಶ್ರುತಿಸ್ಮೃತಿಗೆ ಸಮ್ಮತವಾಗದಿದ್ದೊಡೆ ನಮ್ಮ ಗುರುರಾಯ ॥**
**ಮಥಿಸಿ ಮಧ್ವಾಗಮ ಪಯೋಬ್ಧಿಯ ।**
**ಕ್ಷಿತಿಗೆ ತೋರಿದ ಬ್ರಹ್ಮವಿದ್ಯಾರತರಿಗೀ ।**
**ಪ್ರೀತ ಹರಿಕಥಾಮೃತಸಾರವೆನಿಸುವುದು ॥”**

ಈ ರೀತಿ ಸಕಲ ವೇದಾರ್ಥ ಸಕಲ ಸಚ್ಛಾಸ್ತ್ರಸಾರವನ್ನು ಭಾಮಿನೀ ಷಟ್ಪದಿರೂಪವಾಗಿ ಛಂದಸ್ಸು, ಅಲಂಕಾರಾದಿಗಳಿಂದ ಶೋಭಿತವಾದ ನಿರ್ದುಷ್ಟವಾದ ಕಾವ್ಯವನ್ನು ರಚಿಸಿದರು. ಇವರು ಭಕ್ತಿಪಥವನ್ನು ತೋರಿದರಲ್ಲದೇ ಲೋಕೋಪಕಾರ, ಲೋಕಸೇವೆ, ಜನಹಿತೈಷಣೆ, ಸ್ವರಾಜ್ಯ ಸಾಮ್ರಾಜ್ಯಾದಿ ಅನೇಕ ವಿಭವಗಳು ರಾಜಿಪವಲ್ಲದೇ, ವೈಜ್ಞಾನಿಕ (ಸೈನ್ಸ್) ಭೂಗರ್ಭ ರಸಾಯನ, ಭೂಗೋಳ, ಖಗೋಳ, ಶಾಸ್ತ್ರ, ಜ್ಯೋತಿಃಶಾಸ್ತ್ರಾದಿ ಅನೇಕ ಶಾಸ್ತ್ರಗಳ ಪರಿಚಯವನ್ನು ಮಾಡಿಕೊಡುತ್ತಾ ವೈದ್ಯ ವಿಶಾರದತ್ವ ವೇದ ಷಡಂಗಗಳ ಭಾವ ತುಂಬಿ ತುಳುಕಿಸಿ ಹೊರಸೂಸಿದ ಮೂವತ್ತೆರಡು ಸಲ್ಲಕ್ಷಣಯುಕ್ತವಾದ ಶ್ರೀಹರಿಯ ಪ್ರತಿಬಿಂಬರೂಪವಾದ ಶ್ರೀಹರಿಕಥಾಮೃತಸಾರವಿದು. ಕನ್ನಡದಲ್ಲಿ ನಿರ್ದುಷ್ಟವಾದ ಅತಿ ಉಚ್ಚಕಾವ್ಯವಿದು. ಪ್ರತಿನಿತ್ಯದಲ್ಲಿ ಭಕ್ತಿಯಿಂದ ಪಾರಾಯಣ ಮಾಡಿದರೆ ನಿಜವಾಗಿ ಮುಕ್ತಿಯನ್ನೀಯುವುದೆಂಬುದು ಪೂರ್ವಜರ ಅನುಭವಸಿದ್ಧ.

# ಶ್ರೀ ಹರಿಕಥಾಮೃತಸಾರ ಸಾರಸಂಗ್ರಹ

ಶ್ರೀ ಹರಿಕಥಾಮೃತಸಾರವು ಶ್ರೀಹರಿಯ ಮೂವತ್ತೆರಡು ಸಲ್ಲಕ್ಷಣವಾದ ಲಕ್ಷಣೋತ್ಕರ್ಷವಾದ ಮೂವತ್ತೆರಡು ಸಂಧಿಗಳಿಂದ ಯುಕ್ತವಾದುದು. ಇದರಲ್ಲಿ ೯೮೫ ಪದ್ಯಗಳಿರುವುವು. ಶ್ರೀ ಹರಿಕಥಾಮೃತ ಸಾರದ ಆದಿಯಲ್ಲಿ ಶ್ರೀಮಜ್ಜಗನ್ನಾಥದಾಸಾರ್ಯರು—

**ಹರಿಕಥಾಮೃತಸಾರಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮಭಗವದ್ಭಕ್ತರಿದನಾದರದಿ ಕೇಳುವುದು ॥**

ಎಂದು ನಮನಮಾಡುತ್ತಾ ಅಧಿಕಾರ್ಯಾದಿ ಸಂಬಂಧ ಚತುಷ್ಟಯವನ್ನು ಹೇಳಿರುವರು. ಶ್ರೀಮನ್ನಾರಾಯಣನ ಅನೇಕ ರೂಪಗಳಿರಲು “ಶ್ರೀ ಹರಿಕಥಾಮೃತಸಾರ”ವೆಂದೇ ಏಕೆ ಈ ಗ್ರಂಥಕ್ಕೆ ಅಭಿಧಾನಮಾಡಿದ ರೆಂದರೆ—

**ಜೀವಾಂತಃ ಪ್ರೇರಕೋ ವಿಷ್ಣುಃ ಅಂತರಾತ್ಮೇತಿಯಂ ವಿದುಃ ।**
**ಸಚೋಪಾಸ್ಯಃ ಸದೈವೇಷ್ಟಃ ಸದಾ ಜೀವ ವರೋ ಹರಿಃ ॥**

ಎಂದು ಮಾನಸಸ್ಮೃತಿಯು. ಜೀವಾಂತಃಪ್ರೇರಕನಾದ ವಿಷ್ಣುವು ಅಂತರಾತ್ಮನೆಂದು ಕರೆಯಲ್ಪಡುವನು. ಈ ಅಂತರಾತ್ಮನು ಸದಾ ಇಷ್ಟಪ್ರದನು. ಶ್ರೀಹರಿನಾಮಕನೇ ಬಿಂಬರೂಪಿಯು. ಜೀವಾಂತಸ್ಥನು "ಅಲ್ಲಿದ್ದ ಹರಿಗಾತ್ಮ ಜೀವಹೃದಯನೆಂಬುವರು" ಎಂದು ಪ್ರಾಣೇಶ ದಾಸಾರ್ಯರ ವಚನವಿದೆ. ಹೀಗೆ "ಸ್ವರೂಪ ಬಿಂಬೋಪಾಸನ ಕರ್ಮಣಾ ಮೋಕ್ಷ ಪ್ರಯೋಜನಮಿತಿ ಸರ್ವೇಷಾಂ ಬಿಂಬರೂಪೋ ಹರಿರೇವೇತಿ ಗೀತಾಭಾಷ್ಯೋಕ್ತ ದಿಶಾ ಸರ್ವಜೀವಾಂತಸ್ಥ ಬಿಂಬರೂಪೀ ಹರಿರೇವ । ತದ್ಗುಣಾನ್ ಕಥಯಂತಿ । ಪ್ರತಿ ಪಾದಯಂತಿ । ಕಥಾಃ ವೇದಾಃ ತೇಷಾಂ ಮಧ್ಯೇ ಸ್ವಾದುತ್ವಾತ್ ಮಧುರತ್ವಾಚ್ಚ ಉಪನಿಷತ್ಸಮುದಾಯೋಽಮೃತ ಮಿತ್ಯುಚ್ಯತೇ । ತದ್ರಹಸ್ಯಮೇವಸಾರ ಮಿತ್ಯುಚ್ಯತೇ । ಕಿಂ ನಾಮ ರಹಸ್ಯಮಿತಿ ಸರ್ವ ಪ್ರಕಾರೇಣ ಸರ್ವತ್ರ ಬಿಂಬಕ್ರಿಯಾನುಸಂಧಾನಮೇವ ರಹಸ್ಯಮಿತಿ" ॥ ಎಂದು ತಾಮ್ರಪರ್ಣೀಯ ವ್ಯಾಖ್ಯಾನವು. ಸರ್ವಜೀವಾಂತಸ್ಥ ಬಿಂಬರೂಪೀ ಶ್ರೀಹರಿಯ ಗುಣಗಳನ್ನು ವೇದಗಳು ಹೊಗಳುವುವು. ಆ ವೇದಸಮೂಹ ಮಧ್ಯದಲ್ಲಿ ಅತಿ ಸ್ವಾದೋಪೇತ, ರುಚಿಕರ ಮಧುರವಾದ ಉಪನಿಷತ್ಸಮುದಾಯವು ಅಮೃತವೆಂದು ಕರೆಯಲ್ಪಡುವುವು. ಅದರ ರಹಸ್ಯವೇ ಸಾರ. ಸರ್ವಪ್ರಕಾರದಿಂದ ಸರ್ವತ್ರ ಬಿಂಬಕ್ರಿಯಾನು ಸಂಧಾನವೇ "ಹರಿಕಥಾಮೃತಸಾರ"ವೆಂದು ಹೇಳಲ್ಪಡುವುದು. ಕಾರಣ ಬಿಂಬೋಪಾಸನಕ್ಕೆ ಮುಖ್ಯವಾದುದೆಂದು ಶ್ರೀ ಹರಿಕಥಾಮೃತಸಾರವೆಂದು ಹೆಸರಿಟ್ಟದ್ದು ಬ್ರಹ್ಮಾದಿದೇವತೆಗಳಿಂದ ಮಾನ್ಯವಾಗಿದೆ. ಧ್ಯಾನೋಪಾಸನಕ್ಕೆ ಮುಖ್ಯ ಮೂಲಮಂತ್ರವಿದು. ಬ್ರಹ್ಮಾದಿ ತೃಣಾಂತ ಜೀವರ ಸಾಧನ ಸಾಮ್ರಾಜ್ಯವನ್ನು ತೋರುವ (ಆದರ್ಶ) ಕನ್ನಡನುಡಿಯ ಕನ್ನಡಿಯಿದು ರಹಸ್ಯವಾದುದು. ಮಂದರಿಗೆ, ಪಿಶುನರಿಗೆ, ನಿಷ್ಠುರರಿಗೆ, ಅಯೋಗ್ಯರಿಗೆ ಉಪದೇಶಾರ್ಹವಲ್ಲ. ಪರಮರಹಸ್ಯವೆಂದು ಶ್ರೀ ದಾಸಾರ್ಯರೇ ಐತರೇಯೋಪನಿಷದ್ರಹಸ್ಯವನ್ನು ಹೇಳಿರುವರು. ಧ್ಯಾನೋಪಾಸನಕ್ಕೆ ಮುಖ್ಯ ಮೂಲಮಂತ್ರವಾದಮೇಲೆ ಸಂಪ್ರದಾಯದಂತೆ ಮುಮುಕ್ಷುಗಳ ಸಾಧನಕ್ಕೆ ಯೋಗ್ಯವಾದುದಾದರೂ ತಾವು ಭಗವದಪರೋಕ್ಷಿಗಳು ಎಂದು ತಿಳಿಸಲು ಅವರೋಹಣಕ್ರಮದಿಂದ ಇಷ್ಟದೇವತಾ ನರಸಿಂಹನು ಮತ್ತು "ಶ್ರೀ ರಮಣಿ ಕರಕಮಲಪೂಜಿತ"ವೆಂಬ ಆದ್ಯಪದ್ಯದಲ್ಲಿ ಸಂಪೂರ್ಣ ಭಾಷ್ಯ, ಅನುವ್ಯಾಖ್ಯಾನ, ವಿಶೇಷವಾಗಿ ಜಿಜ್ಞಾಸಾಧಿಕರಣದಲ್ಲಿ ಹೇಳಿದ ವಾಕ್ಯಗಳಿಗೆ ಸಮನ್ವಯವಾಗುವಂತೆ ಹೇಳಿದ್ದಾರೆ. ಇದು ಅಧಿಕಾರಿಗಳ ಯೋಗ್ಯತೆಯಂತೆ ಸಮನ್ವಯಿಸುವುದು. ಇನ್ನು "ನಾರಸಿಂಹನೇ, ನಮಿಪೆ ಕರುಣಿಸೆಮಗೆ" ಎಂದು ಏಕೆ ಹೇಳಿದ್ದಾರೆಂದರೆ :—

"ನಾರಸಿಂಹತ್ವನಿಷ್ಠ ಪರಿಹಾರರೂಪತ್ವಾದಾಧಿಕಾರಿಕೇ ಇಷ್ಟಫಲದಾತೃತ್ವಾದಭೀಷ್ಟೇತುಭಯರೂಪತ್ವಾತ್ ಸಕಲ ಪ್ರಾಣಿಸ್ವರೂಪಸ್ಥ ಪಂಚರೂಪಾತ್ಮಕ ಬಿಂಬರೂಪತ್ವಾತ್ ತಸ್ಯ ಖಡ್ಗಪ್ರಹಾರೇಣ ಸರ್ವೇಷಾಂ ಲಿಂಗ ವಿದಾರಿಕತ್ವಾತ್ ದುರಿತಧ್ವಾಂತ ನಿವಾರಿಕತ್ವಾಚ್ಚಾಯಮೇವ ನರಸಿಂಹೋ ಅಸ್ಮಿನ್ ಶಾಸ್ತ್ರೇ ಪ್ರತಿಪಾದ್ಯತೇ । ತದುಕ್ತಂ ತತ್ತ್ವಸಂಗ್ರಹೇ ಸರ್ವಜೀವಸ್ವರೂಪೇಷು ನರಸಿಂಹೋಽಂತರಾತ್ಮವಾನ್ । ವಿರಜಾಸ್ನಾನತೋ ಲಿಂಗಂ ಸಿಕ್ತಂ ದ್ವಿಗುಣಮುಚ್ಛ್ರಿತಂ ॥ ತಂ ದೃಷ್ಟ್ವಾ ದೇವ ದೇವೇಶೋ ಲಿಂಗಂ ಸತ್ವ ಗುಣಾನ್ವಿತಂ । ವಿದಾರಯತಿ ಸರ್ವೇಶೋ ಖಡ್ಗೇನಾಂತರಾತ್ಮವಾನ್। ನರಸಿಂಹರೂಪೋ ಭಗವಾನ್ ಲಿಂಗ ಭಂಗಂ ಕರೋತಿಹಿ । ಇತಿ ॥ ನರಸಿಂಹಮಸಹ್ಯೋರು ಪ್ರತ್ಯೂಹತಿಮಿರಾಪಹಂ । ನರಸಿಂಹೋಽಖಿಲಾಜ್ಞಾನಮತಧ್ವಾಂತ ದಿವಾಕರ ಇತಿ ಮಾಯಾವಾದಖಂಡನ ಜಯತೀರ್ಥೀಯೇ ॥

ಮತ್ತು

ಚಿದ್ದೇಹದೊಳಗೆ ಎಂ । ಭತ್ತುಸಾವಿರದೇಳನೂರಿ । ಪ್ಪತ್ತೈದು ನರಸಿಂಹರೂಪದಲಿದ್ದು ಜೀವರಿಗೆ ॥ ನಿತ್ಯದಲಿ ಹಗಲಿರುಳು ಬಪ್ಪಪಮೃತ್ಯುವಿಗೆ ತಾ ಮೃತ್ಯುವೆನಿಸುವ ಭೃತ್ಯವತ್ಸಲ ಭಯವಿನಾಶನ ಭಾಗ್ಯ

ಸಂಪನ್ನ ||"—ಎಂದು ದಾಸಾರ್ಯರ ವಚನವಿದೆ. ಅನಿಷ್ಟಪರಿಹಾರ ಇಷ್ಟಪ್ರಾಪ್ತಿರೂಪವಾದ ದ್ವಿದಳಮೋಕ್ಷ, ಅನಿಷ್ಟರೂಪವಾದ ಲಿಂಗಭಂಗಕ್ಕೆ ವಾಯುದ್ವಾರಾ ಶ್ರೀ ಲಕ್ಷ್ಮೀನರಸಿಂಹನೇ ಮುಖ್ಯ ಕಾರಣನೆಂದು ನರಸಿಂಹನಿಗೆ ನಮನವು. ಶ್ರೀರಮಣಿ—"ನವಿದ್ಯತೇ ಅರಾಃ ದೋಷಾಃ ದುಃಖಾಜ್ಞಾನಾದಯಃ | ಯಸ್ಯಾಃ ಸಾ ನಾರಾ ಲಕ್ಷ್ಮೀಃ ತಸ್ಯಾಃ ಸಿಂಹಃ ಪತಿರಿತ್ಯರ್ಥಃ || ಅಥವಾ ನಾರಾಃ ಮುಕ್ತಾಃ ತೇಷಾಂ ಸಿಂಹಃ ಪ್ರಭುರಿತ್ಯರ್ಥಃ || ಯಸ್ಮಾತ್ ಸರ್ವೇಷಾಂ ಭೂತಾನಾಂ ವೀರ್ಯತಮಃ ಶ್ರೇಷ್ಠತಮಶ್ಚ ತಸ್ಮಾತ್ ನಾರಸಿಂಹ ಆಸೀತ್ ಪರಮೇಶ್ವರಃ ಇತಿ ತಾಪನೀಯಶ್ರುತೇಃ ||"—ಇಂತು ವಾಯ್ವಾಧಿಷ್ಠಾನಗತ "ನಾರಸಿಂಹ"ನು, "ರಿಙ್ ಕ್ಷಯೇ" ಇತಿ ಧಾತೋಃ ಸ್ವರೂಪತೋ ನಾಶ ಶೂನ್ಯತ್ವಾತ್ ನಾರಾಃ ಜೀವಾಃ ತೇಷಾಂ ಸಿಂಹಃ ಶ್ರೇಷ್ಠ ಇತ್ಯರ್ಥಃ | ಸರ್ವಜೀವೋತ್ತಮತ್ವಾತ್ ಹೇ ಮುಖ್ಯ ಪ್ರಾಣ ತ್ವಾಂ ನಮಾಮಿ ||"—ವಾಯ್ವಂತರ್ಯಾಮಿ ನರಸಿಂಹ ಶ್ರೀಹರಿಯ ಉಪಾಸನೆಯು ಮುಖ್ಯ.

**ಮಂಗಳಂ ಭಗವಾನ್ ವಿಷ್ಣುರ್ಮಂಗಳಂ ಮೋಕ್ಷ ಉಚ್ಯತೇ ।**

ವಾಯುದೇವರು ಭಗವದಾಜ್ಞೆಯಿಂದ ಮೋಕ್ಷವನ್ನು ಕೊಡುವವರಾದ ಕಾರಣ ವಾಯ್ವಂತರ್ಯಾಮಿ ಶ್ರೀ ನರಸಿಂಹರೂಪೀ ಪರಮಾತ್ಮನಿಗೆ ನಮನವು ಮುಖ್ಯವಾದುದು—ಎಂದು ನರಸಿಂಹದೇವರಿಗೆ ನಮನ ಮಾಡಿ, ಶ್ರೀ ನಾರಾಯಣ, ಲಕ್ಷ್ಮೀ, ಬ್ರಹ್ಮ, ವಾಯು, ವಾಣೀ, ಭಾರತೀ, ವೇದವ್ಯಾಸ, ಶ್ರೀಮದಾನಂದ ತೀರ್ಥ, ಪರಮಗುರುಗಳಾದ ರುದ್ರದೇವರಾರಂಭಿಸಿ ಸಕಲ ತತ್ವೇಶರು ಸ್ವರೂಪೋತ್ತಮ ಜೀವರು. ಗುರುಗಳಾದ ಕಮಲನಾಭಾದಿ ಯತಿಗಳು ಮಾಕಳತ್ರನ ದಾಸರಿಗೆ ೧೨ ನಾಂದಿಪದ್ಯಗಳಿಂದ ನಮಿಸುತ್ತಾ, ದೇವ ಮಾನುಷರ ಸಾಧನದ ಬೆರಗು ಅರುಹಲು, "ಪರಿಮಳವು ಸುಮನದೊಳಗನಳನು | ಅರಣಿಯೊಳಗಿಪ್ಪಂತೆ ದಾಮೋದರನು ಬ್ರಹ್ಮಾದಿಗಳ ಮನದಲಿ ತೋರಿತೋರದಲೇ || ಇರುತಿಹ ಜಗನ್ನಾಥವಿಠಲನ ಕರುಣ ಪಡೆವ ಮುಮುಕ್ಷಜೀವರು | ಪರಮ ಭಾಗವತರನು ಕೊಂಡಾಡುವುದು ಪ್ರತಿದಿನದಿ"||೧೩|| ಎಂದು ಜ್ಞಾನಪ್ರದವಾದ ಶ್ರೀಹರಿಯ ಹದಿಮೂರು ಮೂರ್ತಿಗಳನ್ನು ಕೊಂಡಾಡುತ್ತಾ ದೀಪದಲ್ಲಿ ಪ್ರದೀಪ್ತವಾದ ತ್ರಯೋದಶಮೂರ್ತಿಗಳನ್ನು ಭಜಿಸಿ, ನಾಂದೀಪದ್ಯ ರೂಪವಾದ ನಂದಾದೀಪವನ್ನು ಹಚ್ಚಿ ಮಂಗಳಾಚರಣೆ ಎಂಬ ಸಂಧಿಯನ್ನು ರಚಿಸಿ ಸನ್ಮಾರ್ಗ ಪ್ರದರ್ಶಕರಾಗಿರುವರು.

## ಎರಡನೆಯ ಸಂಧಿ

# ಕರುಣಾ ಸಂಧಿ

ಎರಡನೆಯ ಸಂಧಿಯಲ್ಲಿ ಜೀವಾಂತಸ್ಥನಾದ ಶ್ರೀಹರಿಪರಮಾತ್ಮನು ಬಹು ಕರುಣಿಯು "ಘೃಣೀ, ದಯಾವಾನ್," ಎಂದು ಕರೆಯಲ್ಪಡುವನು.

"ಯತೋವಾಚೋ ನಿವರ್ತಂತೇ | ಅಪ್ರಾಪ್ಯ ಮನಸಾ ಸಹ" || ಎಂಬುವ ಶ್ರುತಿವಚನಾನುಸಾರ ಲಕ್ಷ್ಮೀ ಸ್ತುತಿಗಳಿಗೆ ಗೋಚರಿಸದಿರುವ ಶ್ರೀಹರಿಯು ಮನ ವಚನಕತಿದೂರನಾದರೂ ನನ್ನಂಘ್ರಿಸೇವಾರತರಾದ ಮಹಾತ್ಮರು ಮಾಡುತಿರುವ ಸಂಸ್ತುತಿಗೆ ಯೋಗ್ಯತೆಯಂತೆ ಕಾರುಣ್ಯದಿಂದ ಒಲಿಯುವನು. ನೆನೆವವರನು ಅನುಸರಿಸಿ ತಿರುಗುವನು. ಪವಿತ್ರಳಾದ ಜಾಹ್ನವೀ-ಜನಕನ ಮಂಗಳಕಥಾಮೃತ ಪಾನಮಾಡುವುದರಿಂದ ಭವಜನಿತ ದುಃಖ ಪರಿಹಾರವಾಗಿ ನಿಜಾನಂದಪ್ರಾಪ್ತಿಯನ್ನು ಹೊಂದುವರು. ಬಹು ಜನ್ಮಗಳಲ್ಲಿ ಅನ್ಯ ನುಡಿಗಳಿಂದ ಕಲುಷಿತವಾದ ವಾಗೇಂದ್ರಿಯಕ್ಕೆ ಪವಿತ್ರಪ್ರದ ಪರಮಾತ್ಮನ ಗುಣಾನುವಾದ ಸ್ತೋತ್ರಮರ ಶ್ರವಣೇಂದ್ರಿಯಕ್ಕೆ ಶ್ರಾವ್ಯವೆನಿಸಿ ತತ್ಪ್ರಸಾದದ್ವಾರ ಆತ್ಮೋದ್ಧಾರಕ್ಕೆ ಕಾರಣವಾಗುವುದು. ತನ್ನ ನೆನೆವರ ಭಕ್ತರ ವಿಯೋಗ ತಾಳಲಾರದೇ ಒಳಹೊರಗೆ ಸಂಗಡಲೇ ತಿರುಗುತ್ತಾ ಅವರ ಯೋಗ್ಯಸಾಧನ ಮಾಡಿಸುವನು. ಸಮೀಪಗನಾಗಿರುವ ಶ್ರೀಹರಿಯು ಸ್ಮರಿಸತಕ್ಕ ಯೋಗ್ಯತೆಯನ್ನು ಪಡೆದು ಆ ಕರುಣಾಳುವಿನ ಪ್ರಸಾದವನ್ನು

ಸಂಪಾದಿಸಿ ಬಾಹ್ಯವಿಷಯಗಳ ಸಂಬಂಧವನ್ನು ಇಂದ್ರಿಯಗಳಿಗೆ ಬಿಡಿಸಿ, (ಹೀಗೆ ವಿಷಯದಿಂದ ಮಲಗಿ ದೂರಾಗಿ) ಪಾಡಲು ಗುರುಮುಖಶ್ರುತ ತತ್ವಗಳನ್ನು ಮನನಮಾಡಲು ಅವರ ಜ್ಞಾನದೊಳಗೆ ಕುಳಿತು ಒಪ್ಪಿಕೊಳ್ಳುವನು. ಆಸನದಲ್ಲಿ ಕುಳಿತು ನಿಜಸಮಾಧಿಯಿಂದ ಧ್ಯಾನಿಸಲು ನಿಲ್ಲುವನು. ಸಮಾಧಿಯಲ್ಲಿ ಕಾಣುವ ವಾಸನಾಮಯರೂಪದಿಂದ ಸನ್ನಿಹಿತನಾದ ಚಿನ್ಮಯನನ್ನು ನೋಡಬೇಕೆಂದು ದೃಢವಾಗಿ ಟೊಂಕಕಟ್ಟಿನಿಂತರೆ ಬಿಂಬರೂಪನಾದ ಕರುಣಾಳು ಕರಚರಣಾದ್ಯವಯವಗಳ ಚಲನೆಯಿಂದ ಹಸನ್ಮುಖವಾದ ಪ್ರಸಾದ ಬೀರುತ್ತಾ ನಲಿಯುವನು. ಅಸಂಪ್ರಜ್ಞಾತ ಸಮಾಧಿಯಲ್ಲಿ ಶ್ರೀಹರಿಯ ಸಂಗಡ ನಲಿದರೆ ಜೀವಾಂತರ್ಯಾಮಿಯಾದ ಸ್ವಾಮಿಯು ಹಾರಿ ಕುಣಿದು ಜ್ಞಾನಕ್ಕೆ ಗೋಚರಿಸುವನು. ಹೀಗೆ ಜೀವಾಂತರ್ಯಾಮಿ ಬಿಂಬನ ಸಕಲ ಕರ್ತೃತ್ವ ಶಕ್ತಿಯನ್ನು ಅರ್ಜುನಾದಿ ಅನೇಕ ಭಕ್ತರುಗಳಿಗೆ ಒಲಿದ ಉಪಮಾನಗಳನ್ನು ತೋರಿ ಬಿಂಬನ ಕಾರ್ಯ ವಿಶದೀಕರಿಸುತ್ತಾ ಸದಾ ಜೀವರ ಸ್ವರೂಪೇಂದ್ರಿಯಗಳಲ್ಲಿ ಪ್ರವರ್ತಿಸುವ ಮತ್ಸ್ಯಾದಿ ದಶರೂಪಗಳನ್ನು ಜೀವ ಹೃನ್ಮಂಡಲಾವಿಷ್ಟಶ್ಯಾಮ. ಜೀವಾಂತರ್ಯಾಮಿ ಶಬಲ ( ಅಂತರಾತ್ಮ ) ಹರಿಯೇ ನೀನು ಶರಣ್ಯನು, ಶಾಶ್ವತನು, ಸಾಮಸನ್ನುತ, ಸಕಲಗುಣಧಾಮ. ಶ್ರೀಜಗನ್ನಾಥವಿಠಲನು, ಈ ಮಹಿಮೆಯೊಳವತರಿಸಿ ಸರ್ವ ಸಜ್ಜನರನ್ನು ಕಾಯ್ದು ಕರುಣಾಳುವಾದ ಬಿಂಬರೂಪನಾದ ಹರಿಯ ಅನಂತ ಗುಣಗಳನ್ನು ಸ್ತೋತ್ರಗೈದರು.

ಮುಂದೆ ಮೂರನೇ ವ್ಯಾಪ್ತಿ ಸಂಧಿಯಲ್ಲಿ ಕರುಣಾಳುವಾದ ಬಿಂಬರೂಪೀ ಶ್ರೀಹರಿಯು ಜೀವಾಂತರ್ಯಾಮಿ ಅಣುರೂಪನಾದಾಗ್ಯೂ ಸರ್ವತ್ರ ವ್ಯಾಪ್ತನು, ಮಹದ್ರೂಪನು, ಅಘಟಿತ ಘಟಕನು. ವ್ಯಾಪ್ಯ ವ್ಯಾಪಕನು, ವ್ಯಕ್ತಾವ್ಯಕ್ತನು, ಬಾಧ್ಯಬಾಧಕನು, ಪೋಷ್ಯಪೋಷಕನು, ಕಾಲರೂಪನೆಂದೆನಿಸಿ, ಪುರುಷ ರೂಪತ್ರಯದಿಂದ ಮಹತ್ತತ್ತ್ವ ಜನಕನು ಬ್ರಹ್ಮಾಂಡ ಸಂಸ್ಥಿತನು. ತತ್ಪುರುಷ ಹೃತ್ಪುಷ್ಕರಸಿಲಯ, ಮಹಾಪುರುಷ ಜಾಂಡಾಂತರದಿ ಬಹಿರಾದಿವ್ಯಾಪ್ತನಾದರೂ ತಾನು ನಿರ್ಲಿಪ್ತನು. ದೇಶಾತೀತನು, ಕಾಲಾತೀತನು, ಸರ್ವರಿಂದ ಭಿನ್ನನು. ವಿಲಕ್ಷಣನು, ಸ್ತ್ರೀ ಪುರುಷ ನಪುಂಸಕ, ಭೂತಾದಿ ಪಂಚಕ, ಶಶಿ, ರವಿ, ಕಾಲ ಸತ್ವಾದಿ ಗುಣಪ್ರಕೃತಿಯೊಳಗೆ ಒಂದೂ ತಾನಲ್ಲ. ಗಂಧ ರಸ ರೂಪ ಶಬ್ದಾದಿಗಳಲ್ಲಿ ತಾನೊಂದಲ್ಲನಾದರೂ ಆಯಾ ನಾಮದಿಂದ ಕರೆಯಿಸಿಕೊಳ್ಳುತ್ತಾ ಜೀವರಿಗೆ ತರ್ಪಕನಾಗಿ ಸಕಲೇಂದ್ರಿಯಗಳಲ್ಲಿದ್ದು ವಿಷಯಭೋಗವೀವನು. ಪಂಚಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯ ಗುಣಗಳಲ್ಲಿ ತತ್ತ್ವಪತಿಗಳಲ್ಲಿ ವ್ಯಾಪ್ತನಾಗಿ ಪ್ರದ್ಯುಮ್ನ ರೂಪಿಯು ವಿವಿಧ ಕರ್ಮಗಳನ್ನು ಮಾಡಿಸಿ ಭವಕ್ಕೆ ಕಾರಣನಾಗುವನು. ಗುಣಿ ಗುಣಗಳಲ್ಲಿದ್ದು ಗುಣಿ ಗುಣ ವಾಚ್ಯನಾಗಿ ತಾನು ಗುಣಬದ್ಧನಾಗದೇ ಆ ಗುಣಜ ಪುಣ್ಯಾಪುಣ್ಯಗಳನ್ನು ಬ್ರಹ್ಮಾದಿಚೇತನರುಗಳಿಗೆ ಉಣಿಸಿ ಪಾಪ ಪರಿಹಾರಕನಾದ ಚಿದಾನಂದೈಕದೇಹನು ಕೊನೆಗೆ ಚರಾಚರ ಭುಕುವೆನಿಪನು. ನಾಶರಹಿತನು, ಜೀವರ ವಿದ್ಯಾ, ಬುದ್ಧಿ, ಸಿದ್ಧಿ ಪ್ರಸಿದ್ಧಿಗಳಲ್ಲಿ ಅನಿರುದ್ಧಾದಿ ನಾಲ್ಕು ನಾಮದಿಂದ ತತ್ತತ್ಕಾರ್ಯ ಮಾಡಿಸುವನಲ್ಲದೇ ನಾಲ್ಕೂ ದೇಹಗಳಲ್ಲಿ ತಾನೇ ಬಿಂಬನೆಂದೆನಿಸಿ ತನಗೆ ತಾನೇ ಸೇವ್ಯ ಸೇವ್ಯಕನಾಗಿ ಸೇವಾಸಕ್ತ ಸುರರೊಳಗೆ ತಾನಿದ್ದು ಅವರಂತೆ ಸೇವೆಯನು ಕೊಂಬನು. ಪಟ ತಂತುಗಳಂತೆ ಶ್ರೀವನಿತೆಯಿಂದ ಸಕಲ ಕಾರಣ ಕಾರ್ಯ ವಸ್ತುಗಳಲ್ಲಿ ಪ್ರೇರಕನು, ಪ್ರೇರ್ಯನು ಬಾಹ್ಯಾಂತರದಿ ಸೂರ್ಯಕಿರಣಗಳಂತೆ ವ್ಯಾಪ್ತನಾಗಿರುವನು. ಪೂಜ್ಯನು, ಪೂಜಕನು, ಪೂಜಾಸಾಧನ ಪದಾರ್ಥವೂ ತಾನಾಗಿಯೇ ಇರುವನಲ್ಲದೇ ತೃಣಕೃತಾಲಯದೊಳಗೆ ಹೊಗೆ ಸಂದಣಿಸದಂತೆ ವನಜ ಜಾಂಡದಿ ಸಕಲರ ಪಿಂಡಾಂಡ (ದೇಹ) ದಿವ್ಯಾಪ್ತನಾಗಿ ತೋರಿಕೊಳ್ಳದಲೇ ಅವರವರ ಯೋಗ್ಯತೆಯಂತೆ ಕರ್ಮವನ್ನು ಮಾಡಿಸುವನು. ಆನಂದಾತ್ಮ, ಅಚ್ಯುತ, ವಿಶ್ವಾಧೀಶ, ವಿಶ್ವಾಧಾರ, ವಿಧಿಜನಕನು ಸಕಲ ಚೇತನರೊಳಗೆ ನಿಯಮ್ಯ ನಿಯಾಮಕನು. ಮನಾದಿ ಕರಣಗಳಲ್ಲಿ ತಾನಿದ್ದು ವಿಷಯ ರೂಪನೂ ತಾನಾಗಿ ಜೀವರಿಗೆ ವಿಷಯಗಳನುಣಿಸುವನು. ತಾನು ವಿಷಯಗಳಲ್ಲಿದ್ದರೂ ವಿಷಯ ನಿರ್ಲಿಪ್ತನೂ, ನಿಜಪೂರ್ಣ ಸುಖಿಯಾಗಿರುವನು. ಗ್ರಾಹ್ಯ ಗ್ರಾಹಕನು. ಶ್ಯಾಮಲನು, ಕೋಮಲಾಂಗನು, ಸುಖಿಯು, ಒಳಗೂ ಹೊರಗೂ ಮತ್ತನಂದದಿ ಸುತ್ತುತ್ತಲಿರುವನು. ಬಿಳುಪಾದ ವಜ್ರ, ನೀಲವಾದ ಹಿರಣ್ಮಣಿ

ಕೆಂಪಾದ ಪವಳ, ಛಾಯೆಯಂತೆ ದೇವ, ದಾನವ, ಮಾನವರಲ್ಲಿ ತ್ರಿವಿಧಗುಣ ಕಾರ್ಯಗಳನ್ನು ಅವರ ಸ್ವರೂಪ ಯೋಗ್ಯತೆಯಂತೆ ವ್ಯಕ್ತಮಾಡುವನು. ಅಣು ಮಹದ್ರೂಪನು, ಘನವಾದ ವಸ್ತುಗಳನ್ನು ಪರಮಾಣು ವಿನೊಳು ಅಡಗಿಸುವನು. ತಪ್ತ ಲೋಹದೊಳಗೆ ಸಪ್ತ ಜಿಹ್ವನಾದ ಅಗ್ನಿಯು ವ್ಯಾಪಿಸಿದಂತೆ ನಿಖಿಲ ಜೀವ ರಲ್ಲಿ ವ್ಯಾಪ್ತನಾಗಿರುವನು. ಮೇಘವು ಮಳೆಗರೆಯಲು ಬೆಳೆದಿರುವ ಅನೇಕ ವಿಧ ವನಸ್ಪತಿಗಳು ಆಯಾ ಬೆಳೆಗಳಲ್ಲಿ ಬೇರೆ ಬೇರೆ ಚಿತ್ರ ವಿಚಿತ್ರ ಫಲ ರಸ ತೋರ್ಪಂತೆ ಜೀವರಲ್ಲಿದ್ದು ಅವರವರ ಯೋಗ್ಯತೆ ಗುಣ ಕರ್ಮಾನುಸಾರ ನಡೆಸುವವನಿಗೆ ವೈಷಮ್ಯಾದಿಗಳಿಲ್ಲ. ಸೂರ್ಯನ ಕಿರಣಗಳು ಮಣಿಗಳಲ್ಲಿ ಸೇರಿ ವಿಕಾರಗೈಸದೆ ಆಯಾ ವರ್ಣಗಳು ಅಭಿವ್ಯಕ್ತಗೈಸುವಂತೆ ತ್ರಿವಿಧ ಜೀವಿಗಳ ಯೋಗ್ಯತೆಯಂತೆ ವಿಹಾರ ಮಾಳ್ಪನಾದರೂ, ಘಳಿಗೆ ಬಟ್ಟಲು ತಾನು ಜಲವನ್ನು ಅಪಹಾರ ಮಾಡುವುದಾದರೂ, ಅದನ್ನು ಬಿಟ್ಟು ಜಯ ಘಂಟೆಯನ್ನು ಪಿಡಿದು ತಾಸು ಬಾರಿಸುವಂತೆ ಸಂತತ ಕರ್ತನಾಗಿ ಶ್ರೀಹರಿಯಿದ್ದರೂ ಪುಣ್ಯಪಾಪಗಳನ್ನು ದೇವಾಸುರರಿಗೆ ತಂದೀವನು. "ದೇಹಸ್ಥನಾದ ಜೀವನು ಕಳವನಾಚರಿಸೆ ದೇಹಕ್ಕೆ ನಿಗಡ ಬಂಧನವಪ್ಪ ತೆರದಂತೆ | ದೇಹಿ ನಿಕರದೊಳು ಹರಿತಾನಿಂತು ಚೇಷ್ಟೆಯಂ ಮಾಡಲದರದರ ಫಲಕೆ || ಈ ದೇವವಂದ್ಯ ಸುಖದುಃಖಭೋಕ್ತನು ಎಂದೊಡಾದೇವಗೇನಹುದು ಕುಂದು ಕೊರತೆಗಳಿಂತ ಮಾ | ಧವನೆ ಆಚರಿಸಿ ಸಂತಸಬಡುವ ಸಕಲ ಪ್ರಾಣಿ ಗಳೊಳಿದ್ದು || (ಗುರು ಶ್ರೀನಿವಾಸ ವಿಠ್ಠಲರು.) ತಾನು ಸರ್ವರೊಳು ಸರ್ವತ್ರ ಹೊಂದಿಕೊಂಡಿರುವನಾದರೂ ಸಂಬಂಧಿತನಾಗದೇ ಅವರಂದದಿ ತಾ ಮಾಡಿ ಮಾಡಿಸಿ, ಅಣುಮಹತ್ತಾದ ಘಟದಲ್ಲಿ ತುಂಬಿದ ಆಕಾಶದಂತೆ ಸರ್ವತ್ರ ವ್ಯಾಪ್ತನಾಗಿರುವನು. ಕಮ್ಮಾರನು ಕಾದಕಬ್ಬಿಣವನ್ನು ಹಿಡಿದು ಬಡಿಯಲು ಅದರಲ್ಲಿ ವ್ಯಾಪಿ ಸಿರುವ ಅಗ್ನಿಗೆ ವ್ಯಥೆಯಾಗದಂತೆ ಆದಿದೇವನಾದ ಶ್ರೀಹರಿಯು ಜೀವನ ಒಳಹೊರಗೆ ಕಾದುಕೊಂಡಿರುವವ ನಿಗೆ ದುಃಖಾದಿಗಳ ಸಂಬಂಧವಿಲ್ಲ. ಬಾಲಕ್ರೀಡೆಯಂತೆ ಮಳಲ ಮನೆಗಳು ಮಾಡಿ ಕೆಲವು ಕಾಲದೊಳಾಡಿ ತುಳಿದು ಕೆಡಿಸುವಂತೆ ಶ್ರೀ ಲಕುಮಿಪತಿಯು ಲೋಕಗಳನ್ನು ಅನಾಯಾಸದಿಂದೇ "ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ" ಎನ್ನುವಂತೆ ಹಲವು ಬಗೆಯಾಗಿ ಸೃಜಿಸುವ, ನಿಶ್ಚಲನಾಗಿ ಸಲಹುವ. ಹಾವು ತತ್ತಿಗಳನ್ನಿಡುತ್ತ ಹೋಗಿ ಹಿಂದಿರುಗಿ ತಾನು ನುಂಗುವಂತೆ ಲಯವನ್ನು ಮಾಡುವ ಹರಿಗೆ ದುಃಖಾದಿಗಳೆಲ್ಲಿ? ಪೂತಾತ್ಮನು, ಪೂರ್ಣಾನಂದ ಜ್ಞಾನಮಯನು, ವೇಷಭಾಷೆಗಳಿಂದ ಜನರ ಪ್ರಮೋದಗೈಸುವ ನಟ ಪುರುಷನಂತೆಯೇ ಬಹುರೂಪ ಮಾತಿನಲಿ ತೋಷಿಸುತ್ತ ಜಗವನ್ನು ಪೋಷಿಸುವನು. ಅಗ್ನಿ ಜಲಸ್ತಂಭ ಬಲ್ಲ ಅಧಮ ಮಾನ ವನು ಮಂತ್ರೌಷಧಿಗಳಿಂದ ಪಾವಕ ಉದಕಗಳ ಸಂಬಂಧಗಳಿಲ್ಲದೇ ಅದರೊಳಗಿಪ್ಪಂತೆ ಕಾಲ ಗುಣಕರ್ಮ ಗಳ ಸಂಬಂಧವು ನಿರಂಜನನಿಗಿಲ್ಲ. ಒಂದು ಗುಣದೊಳನಂತ ಗುಣಗಳು, ಒಂದು ರೂಪದೊಳನಂತ ರೂಪ ಗಳು ಇರುವುವು. ಸಕಲ ಲೋಕಗಳೊಂದೇ ರೂಪದಿ ಧರಿಸಿ ತತ್ತತ್ಪದಾರ್ಥದೊಳಹೊರಗೆ ಬಾಂದಳದ ತೆರದಲಿದ್ದು ಬಹು ಹೆಸರಿನಿಂದ ಕರೆಸುತ್ತ ಪರಿಪರಿಯಿಂದ ಕ್ರೀಡಾ ಮಾಡುವನು. ಎಲ್ಲರೊಳಗೆ ತಾನಿದ್ದು ತನ್ನೊಳಗೆಲ್ಲರನ್ನು ಧರಿಸುವನಾದರೂ ವಿಕಾರಶೂನ್ಯನು, ಬಹು ಸುಂದರನಾದ ಮನ್ಮಥ ಜನಕನು. ಜಗ ದಾಂತ ಮಧ್ಯಗಳನ್ನು ಬಲ್ಲ ಸರ್ವಜ್ಞನು. ಆನಂದಾದಿ ಬಹುಗುಣ ಭರಿತನು. ಹಿರಣ್ಯಕಶಿಪು ದಾನವನ ಸಂಹಾರಗೋಸುಗ ಭಕ್ತನಾದ ಪ್ರಹ್ಲಾದನ ಸೊಲ್ಲು ಲಾಲಿಸಿ, ಸರ್ವತ್ರ ವ್ಯಾಪ್ತಿಯನ್ನು ತೋರಿಸಲು ಸ್ತಂಭ ದಿಂದವತರಿಸಿದ ಶ್ರೀ ಜಗನ್ನಾಥ ವಿಠಲನ ವ್ಯಾಪ್ತಿಯಿದು. ಇಂತು ಶ್ರೀಹರಿಯು ಸಕಲ ಜಗತ್ತಿನ ಒಳಗೆ ಹೊರಗೆ ವ್ಯಾಪಿಸಿರುವ ವ್ಯಾಪ್ತರೂಪ ಒಂದು. ತತ್ತತ್ಪದಾರ್ಥಗಳಂತೆ ತತ್ತದ್ರೂಪ ತದಾಕಾರನಾಗಿ ಆಯಾ ಪದಾರ್ಥಗಳ ಅಸ್ತಿತ್ವಕ್ಕೆ ಕಾರಣವಾದ ಎರಡನೇ ವ್ಯಾಪ್ತರೂಪವು. ಅಹಿತಾದಿ ಪ್ರತಿಮಾಗಳಲ್ಲಿ ಕರಚರಣಾ ದ್ಯವಯವಗಳಿಂದ ಶೋಭಿಪ ಮೂರನೆಯ ವ್ಯಾಪ್ತರೂಪವು. ಜಡದಿಂದ ಭಿನ್ನನು. ಸಚ್ಚಿದಾನಂದ ರೂಪ ಗಳ ವ್ಯಾಪ್ತ ವ್ಯಕ್ತರೂಪಗಳು. ಜೀವ ಸ್ವರೂಪಲಿಂಗ ಉಪಚಯಾರಂಭಿಸಿ ಸ್ಥೂಲದೇಹದ ಒಳಹೊರಗೆ ಬ್ರಹ್ಮಾಂಡದ ಒಳಹೊರಗೆ ದೇಶ, ಕಾಲ, ಕರ್ಮ, ಜಡ, ವೇದಗಳಲ್ಲಿ ಓತಪ್ರೋತನಾಗಿ ಶ್ರೀಹರಿಯು ವ್ಯಾಪ್ತ ನಾಗಿರುವನು. ಈ ಪರ್ಯಂತ ಬಿಂಬರೂಪನ ಅತ್ಯಂತ ಅಗಾಧ ಮಹಿಮೆಯನ್ನು ಹೇಳಿ, ಮುಂದೆ—

ಭೋಜನ ಸಂಧಿ ಎನಿಪ ನಾಲ್ಕನೆಯ ಸಂಧಿಯಲ್ಲಿ—ಇಂಥ ಕರುಣಾಳುವಾದ ಬಿಂಬರೂಪಿಯ ಕಾರುಣಿಕತೆ, ವ್ಯಾಪ್ತತೆ, ನಿರ್ಲಿಪ್ತತೆ, ಸ್ವತಂತ್ರತೆ, ಜ್ಞಾನಾನಂದಾದಿ ಪೂರ್ಣತೆಯನ್ನು ಸ್ತೋತ್ರಗೈದು, ಪೂರ್ವ ಬ್ರಹ್ಮದೇವರ ಎಂಭತ್ತೇಳುವರೆ ವರ್ಷ ಮುಗಿಯಲು ಆರು ಘಳಿಗೆ ಇರಲಾಗಿ ತಾನು ಯೋಗನಿದ್ರೆಯಿಂದೆಚ್ಚೆತ್ತು ಓಂಕಾರಕ್ಕೆ ಸಕಲ ವರ್ಣಾಭಿವ್ಯಂಜಕ ಶಕ್ತಿಯಿತ್ತುದು ವೇದ ಸೃಷ್ಟಿಯಿದು. ಸಂಕುಚಿತವಾದ ಅವ್ಯಾಕೃತಾಕಾಶಕ್ಕೆ ಪ್ರಸರಣ ಶೀಲತೆ ಎನ್ನುವ ವ್ಯಂಜಕ ಶಕ್ತಿಯನ್ನು ಪ್ರದಾನಮಾಡಿ ಅಂಭ್ರಿಣಿಯಿಂದ ಸ್ತೋತ್ರಗೈಸಿಕೊಂಡು ಜಗತ್ಸೃಷ್ಟಿಯನ್ನು ಪ್ರಾರಂಭಿಸಿ ಮುಕ್ತರನ್ನು ತನ್ನುದರದಿಂದ ಹೊರಗೆ ತೆಗೆದು ಮುಕ್ತರ ಕ್ರೀಡೆ ಮಾಡಿ ಎಂಭತ್ತೇಳೂವರೆ ವರ್ಷ ಮುಗಿಯಲು ಪೂರ್ವಕಲ್ಪದ ಮುಕ್ತಿಯೋಗ್ಯರನ್ನು ಸ್ವಸ್ವ ಯೋಗ್ಯತೆಯಂತೆ ಮುಕ್ತರನ್ನಾಗಿ ಮಾಡಿದನು. ಗಾಢಾಂಧಕಾರವಾದ ಅಸೃಜ್ಯರಾಶಿಯಲ್ಲಿ ಅನಭಿಮತ ಕರ್ಮಪ್ರವಾಹದೊಳು ಜೀವತತಿಯು ಅನುಪಮನಾದ ಶ್ರೀಹರಿಯ ವಶವಾಗಿರಲು ಕಾಲದಲ್ಲಿ ಜೀವರೆಲ್ಲಾ ನಿಷ್ಕ್ರಿಯ ಚೇತನಾಭಾಸರೆಂದು ಕರೆಸುವರು. ಅಮೋಘಚರಿತನಾದ ಶ್ರೀಹರಿಯು ಅನವರತ ಪಾಲಿಸಲು ತನ್ನ ಮಡದಿ ಅಧಿದೈವವೆನಿಪ ಜೀವರ ಅನಾದಿ ಸ್ವಭಾವ ಯೋಗ್ಯತೆಯಂತೆ ಜಡರೂಪದ ಲಿಂಗತನು ಉಪಚಯಮಾಡಿ ಜೀವರ ಸ್ವಭಾವ ಯೋಗ್ಯತೆ, ಅನಾದಿಕರ್ಮ, ಸುಕೃತ, ದುಷ್ಕೃತ, ಫಲಭೋಜನ, ಲಿಂಗ ಉಪಚಯ ದ್ವಾರಾ ಹೇಗೆ ಮಾಡಿಸುವನೆಂದು ಭೋಜನಸಂಧಿಯನ್ನು ಹೇಳಿರುವರು.

ಜೀವರು ನಿತ್ಯರು, ಜಡವಾದ ಅನಾದಿ ಕರ್ಮವೆಲ್ಲದು? ಜೀವರು ಚೇತನರು, ಶ್ರೀಹರಿಗೆ ಪ್ರತಿಬಿಂಬರು. ಬಿಂಬನಾದ ಶ್ರೀಹರಿಯು ಅವರವರ ಯೋಗ್ಯತೆಯಂತೆ ಅಸೃಜ್ಯಾವಸ್ಥೆಯಲ್ಲಿಯೂ ಸಹ ಶ್ವಾಸೋಚ್ಛ್ವಾಸ ಮಾಡಿಸುವನು. ಈ ಶ್ವಾಸೋಚ್ಛ್ವಾಸಕ್ರಿಯೆಯೇ ಅನಾದಿಕರ್ಮ. ಅನಾದಿಯಾಗಲು ಕಾರಣವೇನು? ಅದರ ಸ್ವರೂಪವೇನು? ಇತ್ಯಾದಿ ಅನಾದಿಕರ್ಮ ವಿಷಯವನ್ನು ಸತ್ತತ್ತ್ವರತ್ನಮಾಲಾಕಾರರು ಸವಿಸ್ತರವಾಗಿ ಹೇಳಿರುವರು.

ಜೀವರು ಬೀಜರೂಪರು, ಮೇಲಿನ ಗೊರಟೆ ಲಿಂಗ ದೇಹರೂಪವಾಗಿರುವುದು. ಬೀಜವನ್ನು ಭೂಮಿಯಲ್ಲಿ ಊರಿ ನೀರೆರೆಯಲು ಉಪಚಯವಾಗಿ ಗೊರಟೆಗೂ ಬೀಜಕ್ಕೂ ಸಂಬಂಧವಾಗುವಂತೆ ಗಜಗಿನೋಪಾದಿಯಲ್ಲಿ ಇದ್ದ ಲಿಂಗದೇಹಕ್ಕೆ, ದ್ವಿತೀಯ ವ್ಯೂಹಗತ ವಾಸುದೇವೋದ್ಭೂತ ನಾರಾಯಣನು ಕ್ಷೋಭಕ ರೂಪದಿಂದ ಜೀವರುಗಳಿಗೆ ಹಸಿವೆ ನೀರಡಿಕೆಯಿತ್ತು ಆಸ್ವೇದವೆಂಬುವ ವಾರಿಯಿಂದಲೇ ಲಿಂಗದೇಹವನ್ನು ಉಪಚಯ ಮಾಡುತ್ತಾ ಚೇತನರಾದ ಜೀವರಿಗೆ ಲಿಂಗದೇಹ ಸಂಬಂಧಮಾಡಿ ಅನಾದಿಕರ್ಮಬದ್ಧರನ್ನಾಗಿ ಮಾಡಿ ತ್ರಿವಿಧಗುಣ ಕಾರ್ಯಗಳನ್ನು ಭೋಜನ ಮಾಡಿಸುವನು. ಸೂಕ್ಷ್ಮರೂಪವಾದ 'ನಾರಾಯಣನ ವೈಬೆವರೇ ಅತಿ ಸೂಕ್ಷ್ಮರೂಪ ಚತುರವಿಧಾನ್ನ ರಸರೂಪವಾಗಿರುವುದು. ವನಜಜಾಂಡದೊಳು ಅಖಿಲ ಚೇತನರು ಭುಂಜಿಪ ಚತುರವಿಧ ರಸರೂಪ ತಾನಾಗಿ ಮನಕೆ ಬಂದುದನುಂಡು ಉಣಿಸಿ ಸಂಹನನ ಕುಪಚಯಕರಣಕೆ ಆನಂದ, ಅನಿಮಿಷರಿಗೆ ಆತ್ಮಪ್ರದರ್ಶನರೂಪ ಆನಂದವೀವನು. ಅನಾದಿಯಿಂದ ಗೂಡಿನಂತಿರುವ ಲಿಂಗದೇಹಕ್ಕೆ ಷೋಡಶಾತ್ಮಕ ರಸವಿಭಾಗಮಾಡಿ ಷೋಡಶಕಲೆಗಳಿಗೆ ಉಪಚಯಗಳನ್ನು ಕೊಡುತ್ತ ಸ್ಥೂಲದೇಹದಿ ತೇಜೋರೂಪವಾದ ಎಪ್ಪತ್ತೆರಡುಸಾವಿರ ನಾಡಿಗತ ದೇವತೆಗಳು ತಾನಿದ್ದು ಆನಂದಾತ್ಮನು ಕ್ರೀಡಿಸುವನು. ಆಸ್ವೇದರೂಪನೇ ವಾರಿವಾಚ್ಯನೆಂದು ಕರೆಸುವನು. ಆ ವಾರಿಶಬ್ದವಾಚ್ಯನಾಗಿ ತ್ರಿಗುಣಾವರ್ಣಲಿಂಗ, ಗುಣತ್ರಯ ದ್ವಿಗುಣ ಧರ್ಮಗಳೇ ಆರು ರಸವೆಂದು ಕರೆಸುವವು. ಇವುಗಳಲ್ಲಿ ಶ್ರೀಹರಿಯು ಮೂವತ್ತಾರುಸಹಸ್ರ ಪುರುಷ ಸ್ತ್ರೀಭೇದದಿಂದ ಬೃಹತಿ ಎಂಬ ಸುನಾಮದಿಂದ ಕರೆಸುವನು. ಈ ಸೂಕ್ಷ್ಮ ಆರು ರಸಗಳೇ ಸತ್ವಾದಿ ಭೇದದಿಂದ ಆರು ಮೂರಾಗಿಹವು. ಹದಿನೆಂಟು ಸಾರಾಸಾರ, ನೀತಾನೀತ, ಖಂಡಾಖಂಡವಾದ ಚಿತ್ರುಚುರಕ್ಕೆ ಕಾರಣವಾದ ಈ ಹದಿನೆಂಟು ಸೂಕ್ಷ್ಮರಸ ವಿಭಾಗಗಳನ್ನು ಹೀಗೆ ತಾತ್ಪರ್ಯರಹಸ್ಯವನ್ನು ಸ್ವೋತ್ತಮರಾದ ಜ್ಞಾನಿಗಳಿಂದ ತಿಳಿಯಬೇಕೇ ಹೊರ್ತಾಗಿ ಇಲ್ಲಿ ವಿವರಿಸಲು ವಿಸ್ತಾರ

ಭಯವೂ "ರಹಸ್ಯತ್ವಾನ್ನ ಕಥ್ಯಥೇ" ಎಂಬ ಶ್ರೀಮದಾಚಾರ್ಯರ ಉಕ್ತಿಯೇ ಶೃಂಖಲಾಬದ್ಧವಾದುದು. ಹೀಗೆ ಗುರುಗಳಿಂದ ತಿಳಿದು ಭುಂಜಿಸಲು ಬಂಧನನಾಶವು ಸ್ವರೂಪಾನಂದಾವಿರ್ಭಾವವು. ಇಲ್ಲಿ ಲಿಂಗದಲ್ಲಿ ಸಂಕುಚಿತವಾಗಿ ಇಪ್ಪತ್ತುನಾಲ್ಕು ಜಡತತ್ತ್ವಗಳುಂಟು, ಪಂಚಕೋಶಗಳುಂಟು. ಅವುಗಳಲ್ಲಿ ನಿಯಾಮಕ ಭಗವಂತ, ಶ್ರೀ ರಮಾದೇವಿ, ಬ್ರಹ್ಮ, ವಾಯು, ಭಾರತೀ, ಸರಸ್ವತಿಯರುಂಟು. ಈ ಸೂಕ್ಷ್ಮಜ್ಞಾನವಾಗಲಿಕ್ಕೆ ಅಜ್ಞರಿಗೆ ಸ್ಥೂಲಶರೀರದ್ವಾರಾ ಸ್ಥೂಲರಸವೇ ಪ್ರಾಮುಖ್ಯವೆಂದು ನಿಜಮರ್ಮವನ್ನರಿತ ಶ್ರೀ ವಿಜಯದಾಸರ ವಚನವಿದೆ. ಕರ್ಮಭೋಕ್ತೃತ್ವವು ಹೇಗೆ? ಮೋಚಕತ್ವವು ಹೇಗೆನ್ನುವುದೇ ಈ ಭೋಜನಸಂಧಿಯ ಮುಖ್ಯ ತಾತ್ಪರ್ಯವು. ಲಿಂಗಕ್ಕೆ ಅವ್ಯಕ್ತ ಶರೀರವು ಲಿಂಗದೋಪಾದಿಯಲ್ಲಿ ಇರುವುದು. ಜಡಸಂಬಂಧವಾದ ಕರ್ಮಬಂಧನರೂಪ ಜೀವಾಚ್ಛಾದಿಕ, ಪಟಲದ್ವಯಕ್ಕೆ ಕಾರಣಳಾದ ಶ್ರೀ ಇಂದಿರೆಯ ರೂಪದ್ವಯಗಳು ಇಲ್ಲಿ ಉಂಟು. ಮುಂದೆ ಬ್ರಹ್ಮಾಂಡಾವರಣದೋಪಾದಿಯಲಿ ಅಸಂಸೃಷ್ಟ ತತ್ವಗಳಿಂದ ಅನಿರುದ್ಧ ಶರೀರವು ಲಿಂಗದಂತೆಯೇ. ಅನಿರುದ್ಧನಾಮಕ ಪರಮಾತ್ಮನು ಬ್ರಹ್ಮದೇವರ ಇಪ್ಪತ್ತೊಂದನೇವರ್ಷ ಆರಂಭಿಸಿ ಮೂವತ್ತೈದುವರ್ಷಪರ್ಯಂತ ಸಕಲ ಜೀವರಿಗೆ ಅನಿರುದ್ಧನು ಶರೀರ ಕೊಟ್ಟು ಕಾಪಾಡುವನು. ಈ ಅನಿರುದ್ಧನಲ್ಲಿ ಇಪ್ಪತ್ತುನಾಲ್ಕು ಜಡತತ್ತ್ವಗಳು, ಪಂಚಕೋಶಗಳು, ತತ್ತ್ವದಭಿಮಾನಿ ದೇವತೆಗಳು ವ್ಯಕ್ತತಯಾ ವಾಸವಾಗಿರುವರು. ಕುಕರ್ಮಪ್ರೇರಿತರಾದ ದೈತ್ಯರು, ಅಲ್ಲಿದ್ದು ಜೀವಾಚ್ಛಾದಿಕ ಪರಮಾಚ್ಛಾದಿಕ ಪಟಲದ್ವಯವು ತತ್ತ್ವದಭಿಮಾನಿ ಸ್ತ್ರೀವಾಚಕ ದೈತ್ಯರು ಅಲ್ಲಿದ್ದು ಇಂದಿರೆ ವಾಯುಗಳೇ ಇವರಿಗೆ ಪ್ರೇರಕರಾಗಿ ಸ್ಥೂಲದಲ್ಲಿ ಕಾರ್ಯಮಾಡಿಸುವರು. ಈ ಅನಿರುದ್ಧ ಶರೀರ ಸ್ಥೂಲದ ನಡುವೆ ಪ್ರಾಕೃತ ದೇಹವಿದೆ. ಅನಿರುದ್ಧ ಶರೀರದವರೆಗೆ ಸೂಕ್ಷ್ಮರಸವಿಭಾಗ ಸ್ಥೂಲಶರೀರಕ್ಕೆ ಸ್ಥೂಲರಸವಿಭಾಗ ದ್ವಾರಾ. ಈರೀತಿ ಅತಿ ಸೂಕ್ಷ್ಮತರ ರಸಲಿಂಗ ಶರೀರಕ್ಕೆ ತತ್ ಸಾಕ್ಷಾತ್ಕಾರತ್ವ ಜೀವನಿಗೆ ಎಂದು ಶ್ರೀ ಛಲಾರಿ ಆಚಾರ್ಯರು ಹೇಳಿರುವರು. ಈ ಪ್ರಕಾರ ವೇದಾಂತ ಅಂಗವಾದ ವೈಜ್ಞಾನಿಕಶಾಸ್ತ್ರ ರಸವಿಭಾಗವು ತತ್ತ್ವತ್ಕಾರ್ಯವನ್ನು ಆಯಾ ಪ್ರಾಕೃತ ಬಿಂದುಗಳಲ್ಲಿ ಚರಿಪ ವಾಯುಭಗವನ್ಮೂರ್ತಿಗಳ ಸಂಖ್ಯೆಯನ್ನು ಅರಿತು ನಾನಾ ಪದಾರ್ಥದಿ ನೆನೆದು ಭುಂಜಿಸುತಿರುವ ವಿಷಯ, ಶ್ರೀಹರಿಯು ಪ್ರಾಪಕನು, ಸ್ಥಾಪಕನು, ನಿಯಾಮಕನು, ವ್ಯಾಪಕನೆಂದು ಪುಣ್ಯಪಾಪಗಳಲ್ಲಿ ಅವನಡಿಗೆ ಅರ್ಪಿಸುತ್ತ ನೀ ನಿರ್ಲಿಪ್ತನಾಗಿರು ಎಂದು ಹೇಳಿ ಐದುಲಕ್ಷ ಎಂಭತ್ತೊಂಭತ್ತುಸಾವಿರ ಏಳುನೂರ ಐದು ರೂಪದಿ ಭೋಕ್ತೃಭೋಜ್ಯನೆಂದೆನಿಸಿ ಪಾದಾದಿ ಶಿರಪರ್ಯಂತ ವ್ಯಾಪಿಸಿ ಸಂತತ ಜಗನ್ನಾಥ ವಿಠಲನು ಕಾದುಕೊಂಡಿಹನೆಂದು ಭೋಜನ ಸಂಧಿ ಮುಗಿಸಿ ಮುಂದೆ—

## ವಿಭೂತಿ ಐದನೇ ಸಂಧಿ

ಬ್ರಹ್ಮಮಾನದಿಂದ ಹತ್ತುವರ್ಷ ಪರ್ಯಂತ ಆಗುವ ಸೃಷ್ಟಿಕ್ರಮ ಶ್ರೀ ಹರಿಲೀಲೆಗಳನ್ನು ಪೇಳಿ ಅನಿರುದ್ಧ ಶರೀರಕ್ಕೆ ಅಂಕುರಸ್ಥಾನಾಪನ್ನವಾಗಿ ಪ್ರದ್ಯುಮ್ನದೇವರು ಅರ್ಧನಾರೀವೇಷದಿಂದ ಗುಣಬಿಂದುಗಳ ವಿಭಾಗದೊಡನೆ ತನ್ನ ವಿಭೂತಿರೂಪಗಳನ್ನು ವ್ಯಕ್ತಪಡಿಸುತ್ತ

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**

ಎಂಬುವಂತೆ ಬ್ರಹ್ಮ ಮೊದಲಾದವರಲ್ಲಿ ಶಾಂತತ್ವರೂಪದಿಂದ ನೆಲೆಸಿರುವನು. ಬ್ರಹ್ಮಾದಿ ಭೂಸುರರೊಳಗೆ ವಾಸುದೇವನು ವಾಯು, ಖಗಪ, ಶೇಷ, ಶಿವ, ಇಂದ್ರ, ವಿವಸ್ವಾನ್ ನಾಮಕ ಸೂರ್ಯ, ಚಂದ್ರ, ಕಾಮ, ಅಗ್ನಿ ವರುಣಾದಿಗಳ ಕ್ಷತ್ರಿಯ ಜೀವರಲ್ಲಿ ಸಂಕರ್ಷಣನ ವಿಭೂತಿರೂಪ, ಅನಿರುದ್ಧ ಪ್ರಾಣಾಪಾನಾದಿ ಮರುದ್ಗಣ ರುದ್ರಗಣ, ಗಣೇಶ, ವಿಷ್ವಕ್ಸೇನ ಕುಬೇರಾದಿಗಳಾದ ವೈಶ್ಯರಲ್ಲಿ ಪ್ರದ್ಯುಮ್ನನು, ಅಶ್ವಿನೀದೇವತೆಗಳು, ನಿಋುಋತಿ, ಯಮಧರ್ಮ, ಯಮಕಿಂಕರರು, ಪೃಥ್ವೀ, ಕಾಲಮೃತ್ಯು, ಶನೈಶ್ಚರರಾದ ಶೂದ್ರಜೀವರಲ್ಲಿ ಅನಿರುದ್ಧನು, ನಾರಾಯಣನು ಚತುಃಪಾತ್ ತಾನೆಂದೆನಿಸಿ ತತ್ತ್ವಜ್ಞಾತಿಧರ್ಮ ಸುಕರ್ಮಗಳನ್ನು ಮಾಡಿಸುತ್ತ

ಚೇತನರ ಒಳಹೊರಗೆ ಓತ ಪ್ರೋತನಾಗಿದ್ದು ಎಲ್ಲರಿಗೆ ಧರ್ಮಾರ್ಥ ಕಾಮಗಳನ್ನು ಕೊಡುವನು. ಬಿತ್ತಿ ಬೆಳೆಯುವ ಧಾನ್ಯಗಳನ್ನು ಅವನಿಪತಿ ಮೊದಲಾದವರಿಗೆ ಇತ್ತು ರಕ್ಷಿಪನು. ಆವಿ, ಅಜ, ವೃಷ, ಮೊದಲಾದ ಜೀವತತಿ ಅನಿರುದ್ಧನು ಶೂಪ್ರನೆನಿಸಿ ಸಲಹುವನು. ಗೋವುಗಳೊಳು ಉದ್ಗೀಥ ಆವಿ ಅಜಗಳೊಳು ಪ್ರಸ್ತಾವ ಹಿಂಕಾರ ವಾಹನಾಸ್ಪದವಾದ ಹಯಗಳಲ್ಲಿ ಪ್ರತಿಹಾರ, ಜೀವನಪ್ರದ ನಿಧನನಾಮನು ಮನುಜರೊಳಗೆ ಇದ್ದು ಸಕಲ ಚೇತನರುಗಳ ಯಾವದಿಂದ್ರಿಯ ಭೋಗ್ಯರಸವನ್ನು ಸ್ಥೂಲಭುಕ್ ವಿಶ್ವಾಖ್ಯನಾಮಕನು ಸ್ವೀಕರಿಸುವನು.

ಇಂತು ನೀತ ಸಾಧಾರಣವಾಗಿ ದಶ ವಿಭೂತಿಗಳನ್ನಿಟ್ಟು ಕ್ರೀಡಿಸುವ ಶ್ರೀಹರಿಯು ಜಲಧರಾಗಸದೊಳಗೆ ಚರಿಸುವ ಬೀಜಾಂಕುರವಾದ ಅನಿರುದ್ಧದೇಹ ನಿರ್ಮಾಣ ಮಾಡುವನು. ಅನಾದಿ ನಿತ್ಯ ಶ್ರೀಹರಿ ಪ್ರತಿಬಿಂಬ ಅಸ್ವತಂತ್ರವಾಗಿರುವ ಎಲ್ಲ ಜೀವರಲ್ಲಿ ಕ್ರಮೇಣ ಸಜಾತಿ ವಿಜಾತಿ ಸಾಧಾರಣ ವಿಶೇಷಗಳನ್ನು ಪ್ರಚುರಗೊಳಿಸುವನು. ಆಯಾ ಜೀವರ ಯೋಗ್ಯತೆಯಂತೆ ಸತ್ವರಜಸ್ತಮೋ ಪ್ರಾಚುರ್ಯ ಅಪ್ರಾಚುರ್ಯ ಗುಣ ಬಿಂದುಗಳಿಂದ ದೇಹ ನಿರ್ಮಾಣ ಮಾಡುವನು. ವಾರಿಯಲ್ಲಿ ಇಪ್ಪತ್ತುನಾಲ್ಕು ರೂಪಗಳೆಂದು ಹೇಳಿರುವುದು ನಿಜ. ಸಂಸೃಷ್ಟವಾದ ಜಡಪ್ರಕೃತಿ ಗುಣಧರ್ಮ ಬಿಂದುಗಳು ಇರುವುವು. ವೈಜ್ಞಾನಿಕ (ಸೈನ್ಸ್) ಶಾಸ್ತ್ರವರಾದರೂ ಇಪ್ಪತ್ತುನಾಲ್ಕು ಪಾಯಿಂಟ್ ನೀರಿನಲ್ಲಿ ತೋರುವರು. ಈ ಜಡಪ್ರಕೃತಿ ಗುಣಬಿಂದುಗಳ ವ್ಯಕ್ತತೆಯಂತೆ ತುಳಸೀ, ಗಂಧ, ಪುಷ್ಪ, ಧೂಪ, ದೀಪ, ಪೂಜಾಸಾಧನ ಪದಾರ್ಥಗಳಲ್ಲಿ ತದ್ಗತ ಬಿಂದುಗಳು ಅಲ್ಲಿಪ್ಪ ಭಗವದ್ರೂಪಗಳನ್ನು ಹೇಳುವುದರಿಂದ ಜಡಪ್ರಕೃತಿಯಿಂದ ನಿರ್ಮಿತ ಪ್ರತಿಮಾದಿಗಳಲ್ಲಿ ಆಹಿತಾದಿ ವಿಭೂತಿಗಳನ್ನು ಹೇಳಿದಂತಾಯಿತು. ಇಂತು ಪರಮಾತ್ಮನು ಜಡ, ಜೀವ, ಕ್ರಿಯೆಗಳಲ್ಲಿ ಸ್ವಗತ ಭೇದ ವಿವರ್ಜಿತನಾದ ಭಾವಾದ್ವೈತ, ದ್ರವ್ಯಾದ್ವೈತ, ಕ್ರಿಯಾದ್ವೈತ ಶ್ರೀಹರಿಯಲ್ಲಿರುವವೆಂದು ಹೇಳಲು ಶ್ರೀದಾಸರಾಯರು ಅತಿ ಸುಲಭದಿಂದ—

**ವಿತ್ತದೇಹಾಗಾರ ದಾರಾ । ಪತ್ಯಮಿತ್ರಾದಿಗಳೊಳಗೆ ಗುಣ ।**
**ಚಿತ್ತ ಬುಧ್ಯಾದಿಂದ್ರಿಯಗಳೊಳು, ಜ್ಞಾನಕರ್ಮದೊಳು ॥**
**ತತ್ತದಾಹ್ವಯನಾಗಿ ಕರೆಸುತ ಸತ್ಯಸಂಕಲ್ಪಾನುಸಾರದಿ ।**
**ನಿತ್ಯದಲಿ ತಾ ಮಾಡಿ ಮಾಡಿಪನೆಂದು ಸ್ಮರಿಸುತಿರು ॥ ೧೦ ॥**

ಈ ಪ್ರಕಾರವಾಗಿ "ಭಾವ ದ್ರವ್ಯಕ್ರಿಯೆಗಳೆನಿಸುವ | ಈ ವಿಧಾದ್ವೈತತ್ರಯಂಗಳ ಭಾವಿಸುತ ಸದ್ಭಕ್ತಿಯಲಿ ಸರ್ವತ್ರ ಮರೆಯದಲೇ" ॥ ಎಂದು ಶಾಸ್ತ್ರಮರ್ಮವನ್ನು ಅತಿ ಸುಲಭದಿಂದ ಮಾದರಿಗೆ ಬೋಧಿಸಿ ಆಕಾಶಾದಿ ಭೂತ ಪಂಚ, ಇಂದ್ರಿಯ, ಇಂದ್ರಿಯಗೋಳಕ, ಪಾಪಪುಣ್ಯಕರ್ಮ, ಮನವಚನಕ್ರಿಯೆ, ದೇಹವೆಂಬ ಪಟ್ಟಣ, ಇದೇ ಅರಮನೆ, ರಾಜಗೃಹ, ಈ ಶರೀರವೇ ರಥವು. ಇದರಲ್ಲಿ "ಯಂತಾರಂ ಪ್ರಾಣಧಾಮಕಂ" ಎನ್ನುವ ಪ್ರಕಾಶಸಂಹಿತಾ ವಾಕ್ಯದಂತೆ ಮಾತರಿಶ್ವನ ದ್ವಾರಾ ಸಕಲ ಚೇಷ್ಟೆಗಳನ್ನು ಮಾಡುವನು. ಈ ದೇಹವೇ ಆಪಣ, ಅಂಗಡಿ, ಪಿಂಡಾಂಡದಂತೆ ವಾರಿಜ ಭವಾಂಡಾದಿಗಳು ಶ್ರೀಹರಿಯ ಪೂಜಾಕ್ಕೆ ಯಜ್ಞತ್ವೇನ ಸಮರ್ಪಿಸಿ, ಭಾವಾದ್ವೈತ, ದ್ರವ್ಯಾದ್ವೈತ, ಕ್ರಿಯಾದ್ವೈತಗಳ ಮರ್ಮವನ್ನು ವಿಶದೀಕರಿಸಿ ದೇಶವಾದ ಪೂರ್ವದಿಕ್ಕುಗಳಲ್ಲಿ ಹೃದಯ ಜ್ಯೋತಿಯಾದ ಹಂಸನಾಮಕನು ಕಾಲಗಳಲ್ಲಿ ಪರಿವತ್ಸರ, ಇಡಾವತ್ಸರ, ಅನುವತ್ಸರ, ಸಂವತ್ಸರಾದಿಗಳಲ್ಲಿ ಅನಿರುದ್ಧಾದಿ ವಿಭೂತಿಗಳನ್ನು ಸ್ಮರಿಸುವವರಿಗೆ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುವ ಜಗನ್ನಾಥ ವಿಠಲನ ಕರುಣೆಗೆ ಎಣೆಯೆ. ಈ ಪ್ರಕಾರ ಶ್ರೀಹರಿಯ ಮಹಾ ಮಹಿಮೆಯನ್ನು ಹೇಳಿರುವರು.

ಮುಂದೆ ಪಂಚಮಹಾಯಜ್ಞ ಸಂಧಿಯೆಂಬ ಆರನೆಯ ಸಂಧಿಯಲ್ಲಿ ಬ್ರಹ್ಮಾಂಡವು ಸಂಸೃಷ್ಟ ತತ್ವಗಳಿಂದ ನಿರ್ಮಾಣವಾದೋಪಾದಿಯಲ್ಲಿ ಸ್ಥೂಲ ಶರೀರ ನಿರ್ಮಾಣ, ಪಂಚಭೂತಗಳ ಪಂಚವೃತ್ತಿ, ತ್ರಿವೃತ್ತಿಕರಣಗಳನ್ನು ಸೂಕ್ಷ್ಮರೀತಿಯಿಂದ ಹೇಳುತ್ತ ಸ್ಥೂಲಶರೀರಕ್ಕೆ ಜೀವನು ಬರಬೇಕಾದರೆ ಗಗನ ಮೇಘ,

(ಭೂಮಿ, ಬೆಳಸು,) ಪಿತೃ ಪಾತ್ರ "ದ್ಯುಪರ್ಜನ್ಯಧರಾ ಪುಂ ಸ್ತ್ರೀ" ಎಂಬ ಪಂಚಾಗ್ನಿಗಳಲ್ಲಿ ಜೀವನ ಹೋಮಕ್ರಮವಾಗಿ ಶ್ರೀಹರಿಗೆ ಅರ್ಪಿಸುತ ಪಂಚ ಪಂಚ ರೂಪಗಳಿಂದ ಪಂಚನಾರೀ ತುರಗದಂದದಿ ಸಂಚರಿಸಿ ಪಂಚ ಭೂತಾತ್ಮಕ ಶರೀರವ ಪಂಚವಿಧ ಜೀವರಿಗೆ ಕೊಟ್ಟು ರಮಿಸುವನು. ಹೃದಯದಿ ಏಕಾತ್ಮ ಅಧ್ಯಾತ್ಮಾದಿಗಳಲ್ಲಿ ಅಚ್ಯುತಾನಂತ ಗೋವಿಂದ ದಶಪ್ರಾಣರಲ್ಲಿ ವಿಹರಿಪ ರೂಪಗಳನ್ನು ಶಬ್ದಗಳ ಅಧಿಷ್ಠಾನ ದಲ್ಲಿಯ ಐದು ಅವಿದ್ಯಾಗಳಲ್ಲಿ ಹೃದ್ಯೋಲ್ಕಾದಿ ಪಂಚನಾಮಗಳಲ್ಲಿ ಉದ್ಗೀಥಾದಿರೂಪಗಳು ಯುಗಚತುಷ್ಟಯ ಗಳಲಿ ವಾಸುದೇವಾದಿ ರೂಪದಿಂದ ತಲೆಯೊಳು ನಾರಾಯಣನು, ಗಂಟಲೆಡೆಯಲಿ ವಾಸುದೇವ, ಬಲದಿ ಪ್ರದ್ಯುಮ್ನನು, ಎಡದಿ ಅನಿರುದ್ಧನು, ಕೆಳಗಿನಂಗದಿ ಸಂಕರ್ಷಣನು, ತನು ವಿಶಿಷ್ಟದಿ ನಾರಾಯಣನು ಕಟಿಪಾದಾಂತ ಸಂಕರ್ಷಣನು, ಶಿರಜಘನಾಂತ ವಾಸುದೇವನು, ಅನಿರುದ್ಧ ಎಡ, ಪ್ರದ್ಯುಮ್ನ ಬಲಭಾಗದ ಲಿಪ್ಪನೆಂದು ದೇಹದುಪರಿ ದಶಾವರಣದಲ್ಲಿ ಚಿಂತನೆಯ ಮಾಳ್ಪರಿಗೆ ಮೈಲಿಗೆ ವಿಧಿ ನಿಷೇಧಾದಿಗಳಿಲ್ಲ. ಮುಂದೆ ಇಪ್ಪತ್ತುನಾಲ್ಕು ತತ್ತ್ವ, ತತ್ತ್ವಪತಿಗಳಲ್ಲಿ ರಾಜಿಸುವ ಕೇಶವಾದಿ ಇಪ್ಪತ್ತನಾಲ್ಕು ಮೂರ್ತಿಗಳಕಾರ್ಯ. ಕಾಲನಿಯಾಮಕ ಮಾಸಾದಿ ದ್ವಾದಶ ಮೂರ್ತಿಗಳೇ ದ್ವಾದಶ ನಾಮಗಳಲ್ಲಿ ವೇದವ್ಯಾಸ ಅನಿರುದ್ಧಾದಿ ರೂಪಗಳು. ಋತುಗಳಲ್ಲಿ ವಾಸುದೇವಾನಿರುದ್ಧನು, ಪುರುಷ ಶರೀರದಲ್ಲಿ ಸ್ತ್ರೀಶರೀರದಲ್ಲಿ ಸಂಕರ್ಷಣ ಪ್ರದ್ಯುಮ್ನ. ಸರ್ವಾಸುನಿಲಯ ನಾರಾಯಣನ ಸದುಪಾಸನೆ ಮಾಡುವುದು. ಇಂದ್ರಿಯ ಸತ್ವಾದಿಗುಣ ಪಂಚಭೂತ ತತ್ತ್ವದಭಿಮಾನಿದೇವತೆ ಬ್ರಹ್ಮಾದಿಗಳಲ್ಲಿ ರಾಜಿಪ ವಾಸುದೇವಾದಿರೂಪ ಚತುಷ್ಟಯಗಳನ್ನು ಪರವಶದಿ ಪಾಡುವವರಿಗೆ ತನ್ನಿರವ ತೋರ್ಪ ಜಗನ್ನಾಥ ವಿಠಲನು. ಜೀವನ ಚಿದ್ದೇಹದ ಮನದಲ್ಲಿ ನಾರಾಯಣನು, ಶ್ರವಣಾಲಿಯಲ್ಲಿ ಮತ್ಸ್ಯ ಕೂರ್ಮ ಕೋಲವರಹತ್ವಕ್ಕಿನಲ್ಲಿ, ರಸನದಿ ನರಸಿಂಹ, ನಾಸಿಕದಿ ವಾಮನ, ವದನದಿ ಭಾರ್ಗವ, ಹಸ್ತದಿ ರಾಮ, ಪಾದದಿ ಶ್ರೀಕೃಷ್ಣ, ಬುದ್ಧರೂಪ ವಾಯುವಿನಲ್ಲಿ ಮೇಢ್ರದಿ ಕಲ್ಕಿ. ಇನಿತು ದಶರೂಪಗಳ ದಶಕರಣಗಳಲಿ ತಿಳಿದು, ಚಿದೇಂದ್ರಿಯ ಪ್ರವರ್ತಕನಾಗಿ ಸ್ಥೂಲ ಪರ್ಯಂತ ವಿಶ್ರುತನದಿಂದ ಕಾರ್ಯನಡೆಸಿ ವಿಷಯಾನುಭವಗಳನ್ನು ಸ್ವರೂಪಗತ ಪಾದದಲ್ಲಿರುವ ಶ್ರೀಹರಿಯ ಚರಣ ಕೃಷ್ಣರೂಪಕ್ಕೆ ಕೃಷ್ಣಾರ್ಪಣವೆಂದು ಅರ್ಪಿಸುವುದು. ಇದೇ ಪೂರ್ವಪರಂಪರೆಯಿಂದ ಕೃಷ್ಣಾರ್ಪಣ ನಿಯಮದ ಗುಟ್ಟನ್ನು ತಿಳುಹಿದ ಕರುಣಾಳುಗಳು. ಇಂಥ ಸ್ಥೂಲ ಶರೀರದ ಉತ್ಪತ್ತಿಯನ್ನು ಹೇಳಿ.

## ಪಂಚತನ್ಮಾತ್ರಾ ಏಳನೆಯ ಸಂಧಿಯಲ್ಲಿ

ಈ ಸ್ಥೂಲ ಶರೀರ ಪಂಚಭೂತಗಳಲ್ಲಿ ಸಂಸೃಷ್ಟದಿಂದ ದೇಶ ಕಾಲ ಓಂಕಾರರೂಪ ವೇದ ಅಜಾದಿ ಏಕ ಪಂಚಾಶದ್ವರ್ಣಗಳು ಓತಪ್ರೋತವಾಗಿರುವವಲ್ಲದೇ ಇಪ್ಪತ್ತುನಾಲ್ಕು ತತ್ತ್ವಗಳಲ್ಲಿ ಒಂದೊಂದು ತತ್ತ್ವಗಳು ಬೆರೆತಿಹವು. ಮತ್ತು ಸ್ಥೂಲಶರೀರಾರಂಭಿಸಿ ಅನಿರುದ್ಧ ಲಿಂಗಸ್ವರೂಪದಲ್ಲಿ ಹೇಗೆ ಪ್ರವರ್ತಿ ಸಿರುವವು ? ಅವುಗಳ ಕಾರಣ ಕಾರ್ಯರೂಪವೇನು ? ಸಪ್ತ ಧಾತುಗಳಲ್ಲಿ ಪಂಚ ಕೋಶಗಳಲ್ಲಿ ಭಾರತಾದಿ ಸಕಲ ವೇದ ಪ್ರತಿಪಾದ್ಯ ಅಜಾದಿ ಐವತ್ತೊಂದು ವರ್ಣಗಳ ಇರುವಿಕೆ, ವಾಙ್ಮಯ ಮನೋಮಯ ಶ್ರೋತೃಮಯವಾದ ಶ್ರೀಹರಿಯ ಕಾರ್ಯ ಈ ರೂಪಗಳ ಉಪಾಸನೆ ಕ್ರಮವನ್ನು ವಿಶದವಾಗಿ ಹೇಳಿ ಪಂಚ ತನ್ಮಾತ್ರಾಸಂಧಿಯೆಂದು ಹೆಸರಿಟ್ಟರು ಬುಧವರ್ಯರು.

## ಎಂಟನೇ ಮಾತೃಕಾ ಸಂಧಿಯಲ್ಲಿ

ಈ ಅಜಾದಿ ಪಂಚಾಶ ಮೂರ್ತಿಗಳು ದೇಹಗಳಲ್ಲಿ ಹೇಗೆ ಎಲ್ಲೆಲ್ಲಿದ್ದು ಏನೇನು ಕಾರ್ಯ ಮಾಡುವ ರೆಂದು ಅರುಹಿ ದೇಹಸ್ಥ ಸುಷುಮ್ನಾ ನಾಡಿಗತ ಸಪ್ತ ಕಮಲಗಳ ವಿಚಾರ, ಅಲ್ಲಿ ಐವತ್ತೊಂದು ಅಜಾದಿಗ ಳಿರುವ ಕ್ರಮ ದೇಹದ ಅಂಗೋಪಾಂಗಗಳಲ್ಲಿ ಇದ್ದು ಕಾರ್ಯ ನಡೆಸುವ ಭಗವನ್ಮೂರ್ತಿಗಳನ್ನು ವಿಶದೀಕರಿಸಿ ಅವಸ್ಥಾತ್ರಯ ಪ್ರೇರಕ ವಿಶ್ವತೈಜಸ ಪ್ರಾಜ್ಞರುಗಳ ಕಾರ್ಯ ರೋಮಕೂಪಗಳಲ್ಲಿ ವಸಂತಮಾಳಿಯಲ್ಲಿ ವಾಸು

ದೇವನು. ನೂರೊಂದು ಮುಖ್ಯ ನಾಡಿಗಳಲ್ಲಿ ಕಲಶಗಳಲ್ಲಿರುವ ನೂರೊಂದು ಮೂರ್ತಿಗಳು. ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಗಂಗಾದಿ ಸಕಲ ನದಿಗಳು, ತದ್ಗತ ಬೃಹತೀ ಸಹಸ್ರರೂಪಗಳು. ಮೂಲಕಾರಣವೆನಿಪ ದ್ವಾದಶ ನಾಡಿಗಳಲ್ಲಿ ಕೇಶವಾದಿ ರೂಪಗಳು. ಮೃದುಳವಾದ ಸುಷುಮ್ನಾದೊಳಗೆ ಏಕಾತ್ಮನೆಂದೆನಿಸುವನು. ಇಡಾಪಿಂಗಳದಿ ವಿಶ್ವಾದಿ ರೂಪದಿ ಇರುವನು. ಕಾಲರೂಪಿಯು, ಅಬ್ದ, ಆಯನ, ಋತು, ಮಾಸ, ಪಕ್ಷ, ಈ ಶಬ್ದದಿಂದ ಅನಿರುದ್ಧಾದಿ ನಲವತ್ತೈದು ರೂಪದಿಂದ ಶೋಭಿಪನು. ಪಂಚರೂಪಾತ್ಮಕನು, ಪಂಚ ಪಂಚ ಇಪ್ಪತ್ತೈದು ರೂಪಗಳನ್ನು ತಿಥಿಗಳಾದ ಹದಿನೈದು ದಿನಗಳಿಂದ ಹೆಚ್ಚಿಸಲು ಮುನ್ನೂರಾ ಅರವತ್ತು ದಿವಸಗಳಲ್ಲಿ ನೆನೆದು ಚಿಂತಿಸಲು ತಾಪತ್ರಯದ ಭಯವಿಲ್ಲ. ದಿವಸ ಯಾಮ ಮುಹೂರ್ತ ಘಟಿಕಾದ್ಯವಯವ ಗಳಲ್ಲಿ ವೇದ ಪ್ರತಿಪಾದ್ಯ ಕಾಲನಾಮಕನು ಗಂಗಾ ಪ್ರವಾಹದಂದದಿ ಪ್ರವಹಿಸುತಲಿಪ್ಪ ಶ್ರೀಹರಿಯ ಗುಣ ರೂಪ ಕ್ರಿಯೆಗಳಲಿ ಮುಳುಗಿ ಲಕುಮಿ ಸದಾನಂದಾತ್ಮಳೆನಿಪಳು. ಕ್ರಮೇಣ ನಾಮ ಗುಣರೂಪಕ್ರಿಯೆ ಉಪಾಸನೆ ಮಾಳ್ಪ ಜೀವರಲಿ, ದೇವರು ದೇವಕಿ (ಲಕ್ಷ್ಮೀ) ಇದ್ದು ಅವರ ಜ್ಞಾನೇಚ್ಛಾ ಕ್ರಿಯಾಶಕ್ತಿಯು ಕ್ಷೀರ, ದಧಿ, ನವನೀತ, ಘೃತದೋಪಾದಿಯಲಿ ಭಾರತೀ ವಾಗ್ದೇವೀ ವಾಯು ಬ್ರಹ್ಮರಲ್ಲಿ ಸೌರಭರಸಾಹ್ವಯ ನೆನಿಸಿ ಜೀವರುಗಳ ಜ್ಞಾನೇಚ್ಛಾ ಕ್ರಿಯಾಶಕ್ತಿಪ್ರದನಾಗಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ನಾಲ್ಕು ರೂಪದಿಂದ ಶೋಭಿಪನು. ಎಂಟು ಜನ ವಸುಗಳು, ಒಂಭತ್ತು ಜನ ಪ್ರಜೇಶ್ವರರು, ಐವತ್ತು ಮರುತ್ತುಗಳು, ಏಕಾದಶ ರುದ್ರರು, ದ್ವಾದಶ ಆದಿತ್ಯರು, ಒಬ್ಬ ಅಶ್ವಿನೀದೇವ ಹೀಗೆ ಶತಸ್ಥರಲ್ಲಿರುವ ತೊಂಭತ್ತು ಜನರಲ್ಲಿ ನಿಯಮಿಸುವ ಬ್ರಹ್ಮಾ, ವಾಯು, ಗರುಡ, ಶೇಷರಲ್ಲಿ ಚತುರಾತ್ಮಕನು, ಜ್ಞಾನಪ್ರದ ನಾಗಿರುವನು. ಅವಶ್ಯವಾಗಿ ಈ ರಹಸ್ಯವನ್ನರಿತವರಿಗೆ ಚಕ್ರಾದ್ಯಾಯುಧದಲ್ಲಿಪ್ಪ ಕ್ರುದ್ಧೋಲ್ಕಾಭಿನ್ನ ಹಿಂಕಾರಾದಿ ಪಂಚಮೂರ್ತಿಗಳು ಅವಿದ್ಯಾಪಟಲವನ್ನು ಭೇದಿಸಿ ಜ್ಞಾನಪ್ರಕಾಶ ಮಾಡುವವು. ಹೀಗೆ ಐತರೇಯೋಪನಿಷತ್ ಪ್ರತಿಪಾದಿತ ಅಜ್ಞಾನ ಪಟಲ ಭೇದನ ಜ್ಞಾನಪ್ರದರೂಪಗಳನ್ನು ಬೋಧಿಸಿ, ಇಂಥ ಜ್ಞಾನಮಯವಾದ ಸಕಲ ವೇದವರ್ಣಗಳಿಂದ ಶೋಭಿಪ ತನುವೆ ಶ್ರೀಹರಿರೂಪನಾದ ಬಿಂಬನಿಗೆ ರಥ ವಾಗಾಭಿಮಾನಿ ಉಮೆ ಗುಣ (ಲಗಾಮು) ಶ್ರೋತ್ರದಲ್ಲಿರುವ ರೋಹಿಣಿ ಶಶಾಂಕರು ಹಿಂದಿನ ಕುದುರೆಗಳು, ಚಕ್ಷುರ್ಗತವಾದ ಸೂರ್ಯ ಸಂಜ್ಞೆಯರು ಮುಂದಿನ ಕುದುರೆಗಳು. "ಇಂದ್ರಿಯಾಣಿ ಹಯಾನಾಹುಃ" ಎಂಬ ವಚನದಂತೆ ಮುಖ್ಯ ಇಂದ್ರಿಯಗಳನ್ನು ವಿಷಯಕ್ಕೊಳಪಡದೇ ಮನವೆಂಬ ಸಾರಥಿಯಾದ. ಮಹಾ ರುದ್ರನಾದ ರಥ ಚಾಲಕ ಸೂತನ ವಶದಲ್ಲಿರುವುದು. ಇಂಥ ರಥದಲ್ಲಿ ಪ್ರಣವ ಓಂಕಾರ ಪ್ರತಿಪಾದ್ಯನಾದ ಪ್ರಾಣನಾಮಕನೆನಿಸುವನು. ಈತನ ಅಮಿತ ಮಹಿಮೆ ಶ್ರುತಿಸ್ಮೃತಿಗಳು ಸಂಪೂರ್ಣ ಹೊಗಳಲಾರವು. ತದಭಿಮಾನಿಗಳಾದ ಬ್ರಹ್ಮಾದಿ ದೇವತೆಗಳು ಅರಿಯರು. ಕಾರಣ ವಿತ್ತ, ದೇಹ, ಆಗಾರ, ದಾರಾ ಅಪತ್ಯ ಮಿತ್ರಾದಿಗಳಲ್ಲಿ ಹರಿಯು ಪ್ರತ್ಯಗಾತ್ಮ (ಅಂತರ್ಯಾಮಿ)ಯಾಗಿರುವನು ಎಂದು ತಿಳಿದು ಉತ್ತಮ ಮಧ್ಯಮ ಅಧಮರ ಕೃತ್ಯಸಾಧನಕ್ಕೆ ಹರಿಯೇ ಮುಖ್ಯ. ನಾನು ಅವರ ಭೃತ್ಯನೆಂದು ಅರಿವುದೇ ಮಹಾಸಾಧನ. ಇನಿತು ದೇವದೇವೇಶನ ಮೂರ್ತಿಗಳನ್ನು ದೇಹಗಳಲ್ಲಿ ಅನವರತ ಸಂಭಾವಿಸುತ ಪೂಜಿಸುತ ನೋಡುತ ಆನಂದಬಡುತ್ತಿರಲು ಜಗನ್ನಾಥ ವಿಠಲನು ಭವನೋವು ಬಿಡಿಸುವನು. ಹೀಗೆ ಪ್ರಣವ ಪ್ರತಿಪಾದ್ಯನ ಮಹಾಮಹಿಮೆ ಜ್ಞಾನವೀಯುವುದೆಂದು ವರ್ಣಿಸಿದ ಕವಿಕುಲತಿಲಕರು.

## ಒಂಭತ್ತನೇ ವರ್ಣ ಪ್ರಕ್ರಿಯಾ ಸಂಧಿಯಲ್ಲಿ

ಶ್ರೀ ಹರಿಯು ಅಜಾದಿ ಐವತ್ತೊಂದು ವರ್ಣಗಳಲ್ಲಿ ತಾನಿದ್ದು ಒಂದು ವರ್ಣದಲ್ಲಿ ಐವತ್ತೊಂದು ವರ್ಣ ಗಳು ಓತಪ್ರೋತವಾಗಿದ್ದು ಅದರಲ್ಲಿಯೂ ಶ್ರೀಹರಿಯ ರೂಪಗಳಲ್ಲದೇ ಒಂದು ಅವರ್ಣ ಜಡ ಹದಿನಾರು ಅಜಾದಿರೂಪ ಕ=ಹದಿನಾರು, ಕಪಿಲಾದಿ ಒಟ್ಟು ಒಂದು ವರ್ಣದಲ್ಲಿ ನಾಲ್ಕು ಪ್ರಭೇದವು. ಅರವತ್ತನಾಲ್ಕು ಮತ್ತು ಅಕಾರಾದಿ ಅದಿನಾರು; ಕಕಾರಾದಿ ಹದಿನಾರು; ಮೂವತ್ತೆರಡು. ಹೀಗೆ ಒಂದೊಂದು ವರ್ಣಕ್ಕೆ

ಪ್ರತಿ ಪ್ರತ್ಯೇಕ ರೂಪಗಳೂ ವ್ಯಾಪ್ತವಾಗಿಯೂ ವ್ಯಕ್ತವಾಗಿಯೂ ಸ್ವರ, ಉದಾತ್ತ, ಅನುದಾತ್ತ, ಸ್ವರಿತ, ಸಂಧಿ, ವಿಸರ್ಗ ಬಿಂದುಗಳಲ್ಲಿ ವ್ಯಂಜಕನಾಗಿ ತದ್ವಾಚ್ಯನಾಗಿ ತನ್ನಾಮ ರೂಪಗಳನ್ನರಿತು ದೇವತೆಗಳು ಉಪಾಸನೆ ಮಾಡುವರೆಂದರಿತರೆ ಸಕಲ ಶಬ್ದವೂ ವೇದಾರ್ಥವೆನಿಪುದು. ಉತ್ತಮ ಭಕ್ತರಲ್ಲಿ ದೇವರ ಸಾನ್ನಿಧ್ಯ ಹೆಚ್ಚಾಗಿ ಪ್ರಕಟಿಸಲು ವ್ಯಾಪ್ತಜ್ಞಾನಿಗಳ ಲಕ್ಷಣ ತಿಳಿಸಲು ಈಶನಲಿ ವಿಜ್ಞಾನ ಭಗವದ್ದಾಸರಲಿ ಸದ್ಭಕ್ತಿ, ವಿಷಯದಿ ನಿರಾಶೆ, ಮಿಥ್ಯಾವಾದಿಯಲಿ ಪ್ರಕರ್ಷೇಣ ದ್ವೇಷ ಮಾಡುತ್ತ ಮತ್ತು ಈ ಸಮಸ್ತ ಪ್ರಾಣಿಗಳಿಗೆ ತಕ್ಕ ಗುಣ ವ್ಯಕ್ತಮಾಡಿ ಅವರಲ್ಲಿ ರಮೇಶನೇ ನಿಂತು ಮಾಡುವನೆಂದು ಯಾರು ಅರಿತಿರುವರೋ ಅಂಥ ಮಹಾ ಜ್ಞಾನಿಗಳ ಅಭಿಲಾಷೆ ಪೂರೈಸುವುದು ಮಹಾ ಯಜ್ಞವು, ಬಿಂಬನ ಪೂಜೆ. ಜ್ಞಾನ. ಭಕ್ತಿ. ವಿರಕ್ತಿಯಂತೆ ಮಿಥ್ಯಾವಾದಿಯಲಿ ಪ್ರದ್ವೇಷ ಮಾಡುವದು ಸಾಧನ ಮುಖ್ಯ. ಹೀಗೆ ಅಜಾದಿ ಏಕಪಂಚಾಂಶ ದ್ವರ್ಣಗಳ ಓತಪ್ರೋತ ವ್ಯಾಪ್ತಿ ತದುಪಾಸನೆ ಹೇಳುತ್ತ ಸೂಕ್ಷ್ಮದಿ ಹಿಂದೆ ಆರನೇ ಸಂಧಿಯಲ್ಲಿ ಸ್ಥೂಲಶರೀರ ತ್ರಿವೃತ್ಕರಣ ಭೂ ಉದಕ ಶಿಖಿಯಲಿ ನಾಲ್ಕು ಭಾಗ ಪೃಥ್ವಿ, ಮೂರು ಭಾಗ ಉದಕ, ಒಂದು ತೇಜ, ಎಂಟು ಹೀಗೆ ಅನ್ನಮಯ. ನಾಲ್ಕು ಭಾಗ ಉದಕ, ಒಂದು ಭಾಗ ತೇಜ, ಮೂರು ಭಾಗ ಪೃಥ್ವೀ, ಪ್ರಾಣಮಯ. ನಾಲ್ಕು ತೇಜ, ಮೂರು ಉದಕ, ಒಂದು ಭಾಗ ಪೃಥ್ವೀ ಮನೋಮಯ. ಹೀಗೆ ಪ್ರಾಣಾದಿ ದೇವತೆಗಳಲ್ಲಿ ನೆಲೆಸಿ ಏಕಾತ್ಮನು ಪಂಚಜ್ಞಾನ ಕರ್ಮೇಂದ್ರಿಯಗಳಿಗೆ ಉಪಚಯಗಳನ್ನಿತ್ತು ಸಕಲ ವಿಷಯಗಳನ್ನು ನಿಧನನಾಮಕ ಸಂಕರ್ಷಣನು ಸ್ವೀಕರಿಪನು.

ಇನ್ನು ಕರ್ಮವು ದೈಹಿಕ, ದೈಶಿಕ, ಕಾಲಿಕವೆಂಬ ಕರ್ಮಗಳು ಗಹನವಾದವುಗಳುಂಟು. ಇವುಗಳನ್ನು ನಿಷ್ಕಾಮನದಿಂದಾಚರಿಸಿ ಇವುಗಳಲ್ಲಿ ಕೃಷ್ಣ, ಭಾರ್ಗವ, ಹಯವದನನಿದ್ದು ತತ್ತತ್ಕರ್ಮ ಪ್ರವರ್ತಕನೆಂದರಿವುದು. ಈ ಕರ್ಮಗಳಲ್ಲಿಯೂ ಒಂದೊಂದು ಕರ್ಮವು ಅನಂತ ವಿಧವಾಗಿ ಒಂದರಲ್ಲೊಂದು ಸಂಬಂಧೈಸಿರುವುವು. ಹೀಗೆ ಜಡಪ್ರಕೃತಿ ತದ್ಗತ ಇಪ್ಪತ್ತನಾಲ್ಕು ತತ್ತ್ವಗಳು ದೇಶ, ಕಾಲ, ಕರ್ಮ, ವೇದ ವರ್ಣಗಳು ಸಂಸೃಷ್ಟದಿಂದ ಒಂದಕ್ಕೊಂದು ಸಂಬಂಧದಿಂದ ನಿತ್ಯ ವ್ಯಾಪಕವಾಗಿ ಜೀವನಿಗೆ ಬಂಧಕಮಾಡಿಸಿರುವ ಮುಕುಂದನ ಅಗಾಧಮಹಿಮೆಯನ್ನು ಹೇಳಿ—

## ಜೀವನ ಅಣುತ್ವ ಹೇಳುವರು

**ಕುದುರೆ ಬಾಲದ ಕೊನೆಯ ಕೂದಲು ತುದಿ ತೆಗೆದು ಅದರಲ್ಲಿ ನೂರು ಭಾಗ, ಆ ನೂರು ಭಾಗದಲ್ಲಿ ಮತ್ತೊಂದು ತೆಗೆದು ಪುನಃ ಅದರಲ್ಲಿ ನೂರು ಭಾಗ ಮಾಡಲು ಎಷ್ಟು ಪರಿಮಿತಿಯೋ ಬ್ರಹ್ಮಾದಿ ತೃಣಾಂತ ಜೀವ ಪರಿಮಿತಿ ಇಷ್ಟೇ ಇಹುದು. ಜೀವ ಪರಮಾಣು, ಇಂಥ ಜೀವನಲ್ಲಿ ಪರಮಾಣು ಬಹು ಸೂಕ್ಷ್ಮ ರೂಪದಿಂದ ಜೀವನ ಅಂಗುಷ್ಠಾಗ್ರಮೂರುತಿ, ಜೀವನ ಪ್ರಾದೇಶ, ಜೀವಾಕಾರ ಮೂರುತಿಗಳು ಅನಂತ ರೂಪದಿಂದ ಜೀವನ ಚಿದೇಂದ್ರಿಯದಿ ವ್ಯಾಪಿಸಿರುವವು. ಇಂಥ ಜೀವನ ಸೂಕ್ಷ್ಮಾಂಬರದ ಹೃತ್ಕಮಲದಿ ಬಿಂಬನು ಜೀವಾಂಗುಷ್ಠ ಮಾತ್ರದಿ ಇಂಬುಗೊಂಡಿಹನು. ಸರ್ವಜೀವರ ದೇಹಾಕಾರ ರೂಪದಿ ಪುರುಷ ನಾಮಕನು. ಕರಣ ನಿಯಾಮಕ ಹೃಷೀಕೇಶ ಇಂದ್ರಿಯಗಳಲಿ, ಮೂರ್ಧ್ನಿಯಲಿ ವಾಸುದೇವನಿಹನು. ಶ್ರೀಹರಿಯು ಜೀವನ ಸ್ವರೂಪದೇಹದ ಒಳಹೊರಗೆ ವ್ಯಾಪಕನು ತಾನಾಗಿ ನಿರ್ಲೇಪತ್ವದಿಂದ ಜೀವಕೃತ ಕರ್ಮಗಳನ್ನಾಚರಿಸಿ ಬ್ರಹ್ಮವಾಯುಗಳಿಂದ ಶೋಭಿತನಾಗಿ ಪ್ರದೀಪವರ್ಣನು ಸ್ವಮೂರ್ತಿಗಣಮಧ್ಯನಾಗಿ ಹೊಳೆಯುತ ವಿಶ್ವಾದಿರೂಪದಿಂದ ಸೇವೆಗೊಳ್ಳುತಲಿರುವನು. ಈ ಹರಿಯ ಅನುಗ್ರಹದಿಂದ " ಪವನನು ಸ್ವರೂಪದೇಹದಿ ಗರುಡ ಶೇಷ ಭವಾದಿ ನಾಮವ ಧರಿಸಿ, ಕರಣ ನಿಯಾಮಕನಾಗಿ ತಾನು ಹರಿಯಂತೆ ಇಪ್ಪನು " ಮಿಕ್ಕ ದೇವತೆಗಳಿಗೆ ಆ ಸ್ಥಾನವಿಲ್ಲ. " ಧೀವರ್ಾ ಸಮಂತಾ ॥ " ಎಂಬ ಶ್ರುತಿಯಲ್ಲಿ ಹೇಳಿದರ್ಥವು. ಇನ್ನು—**

"ಪವಮಾನಾಭಿದೋ ವಾಯುಃ ಉತ್ತಮಾನಾಂ ಶರೀರಗಃ ।
ಸ್ವರೂಪೇಂದ್ರಿಯ ದೇಹೇಷು ಮಾತರಿಶ್ವಾಭಿಧಾನತಃ ॥
ಸ್ಥೂಲದೇಹಗತಃ ಸೋಪಿ ಮುಖ್ಯಪ್ರಾಣಾಭಿದೋ ಹಿ ಜೆ ।
ಧತ್ತೇ ಲಿಂಗ ಶರೀರಸ್ಥಃ ಸೂತ್ರಂ ನಾಮ ಮಹಾ ಪ್ರಭುಃ ॥
ಸೂಕ್ಷ್ಮದೇಹಗತಃ ಸೋಪಿ ಸೂಕ್ಷ್ಮಂ ರೂಪೀತಿ ಚೋಚ್ಯತೇ ॥"

ಎಂಬುವ ಪ್ರಮಾಣದಿಂದ ಲಿಂಗ ಕಾರ್ಯರಹಿತರಾದ ಲಿಂಗದೇಹಬದ್ಧರಾಗವೇ ಸಲಿಂಗರಾದ ವಾಯುದೇವರು ಜೀವರ ಸ್ವರೂಪ ದೇಹದಲ್ಲಿರುವರು. ಬೇಕಾದಷ್ಟು ನಿರವಕಾಶ ಪ್ರಮಾಣಗಳುಂಟು. ಇದು ಸಿದ್ಧ ಪ್ರಮೇಯ. ಹೀಗೆ ಜೀವನ ನಿಜ ಸ್ವರೂಪ ಹೇಳಿ,

ಇಂಥ ಚಿದಾನಂದ ಸ್ವರೂಪವುಳ್ಳ ಜೀವನಕೆ ತುಷದಂತೆ ಲಿಂಗವು ಸಾವಕಾಶದಿ ಹೊಂದಿಯಿಪ್ಪುದು ಭಗವದಿಚ್ಛೆಯಲಿ. ಇದಕ್ಕೆ ಅಧಿದೇವತೆಯು ಜಡಪ್ರಕೃತಿ ಇಂದಿರೆಯು. ಇಲ್ಲಿ ಬ್ರಹ್ಮ, ವಾಯು, ವಾಣೀ, ಭಾರತೀಯರು, ಅಭಿಮಾನಿಗಳು. ಇವರ ಹೊರ್ತಾಗಿ ಅನ್ಯದೇವತೆಗಳು ಲಿಂಗದಲ್ಲಿಲ್ಲ. ಇಂಥ ಷೋಡಶ ಕಲೆಯುಳ್ಳ ಲಿಂಗ, ಅನಿರುದ್ಧದೇಹ ಮಧ್ಯ ಬಂಧಕಳಾದ ಇಂದಿರೆಯ ಕಾರಣ ರೂಪಗಳುಂಟು. ಅನಿರುದ್ಧ ದೇಹವೇ ರುದ್ರ ಮೊದಲಾದವರಿಗೆ ಇರಲು ಮನೆಯೆನಿಪುದು. ಅಲ್ಲಿದ್ದು ಇತ್ತ ಸ್ಥೂಲದಲ್ಲಿ ಕೃದ್ಧರಾದ ಖಳರು. ದಿವಿಜರು, ಪರಸ್ಪರ ಸ್ಪರ್ಧೆಯಿಂದ ದ್ವಂದ್ವಕಾರ್ಯವನ್ನು ಪ್ರಾಣೇಶನಾಜ್ಞೆಯಲಿ ಮಾಡುವರು. ಮಹಿಯೊಳಗೆ ಸುಕ್ಷೇತ್ರದಿ ತುಹಿನ, ವರ್ಷ, ವಸಂತಕಾಲ ದಿಹಿಕ ದೈಶಿಕ, ಕಾಲಿಕ ತ್ರಯ ಧರ್ಮಕರ್ಮಗಳು ದ್ರುಹಿಣ ಮೊದಲಾದ ಅಮರರು ಆಚರಿಸುವರು.

ಇಂಥ ಸ್ಥೂಲ ದೇಹದಿ ಅತಿ ಸೂಕ್ಷ್ಮವಾದ ಸುಷುಮ್ನಾನಾಡಿಯು ತುದಿ ಹಿಡಿದು ಶಿರದ ಪರ್ಯಂತ ವ್ಯಾಪಿಸಿ, ಋಜುವಾಗಿಹುದು. ಆ ಸುಷುಮ್ನೆಗೆ ವಜ್ರಿಕಾ, ಆರ್ಯ, ಪ್ರಕಾಶಿನೀ, ವೈದ್ಯುತಿಗಳ ಪ್ರಭೇದದಿಂದ ಪಶ್ಚಿಮ, ಉತ್ತರ, ಪೂರ್ವ, ದಕ್ಷಿಣಕ್ಕೆ ಇರುವುವು. ಈ ಬ್ರಹ್ಮ ನಾಡಿಯೊಳು ತ್ರಿಕೋಣ ಚಕ್ರವುಂಟು. ಅಗ್ನಿಮಂಡಲ ಮಧ್ಯಗನಾದ ಸಂಕರ್ಷಣನು ಹೀನನಾದ ಪಾಪಪುರುಷನನ್ನು ಹಾನಿಗೈಸಿ ವಿಜ್ಞಾನ ಮಯನಾದ ವಾಸುದೇವನನ್ನು ಐದಿಸುವನು.

ಮಧ್ಯ ನಾಡಿಯ ಮಧ್ಯ, ಹೃತ್ಪದ್ಮಮೂಲದಿ—ಮೂಲೇಶನ ಪಾದಾಶ್ರಯವಮಾಡಿದ ಪವನನ ಪಾದ ಮೂಲದಲಿ, ಜೀವನು ಲಿಂಗ ಅನಿರುದ್ಧ ದೇಹ ವಿಶಿಷ್ಟನಾಗಿರುವನು. ಕಪರ್ದಿ ಮೊದಲಾದ ಅಮರರೆಲ್ಲಾ ಕಾದುಕೊಂಡಿಹರು.

ಹೃದಯಾಷ್ಟಕಮಲ ವಿವರ ನಾಳಮಧ್ಯ ಹೃತ್ಕಮಲ ಅಷ್ಟದಳದಿ ಮೂಲೇಶನು ಹಂಸನಾಮಕನೆನಿಸಿ ಸಂಚರಿಸುವನು. ಅಷ್ಟದಿಕ್ಪಾಲಕರ ಸೇವೆಗೊಳ್ಳುತ್ತ ಪೂರ್ವಾದಿ ದಳಗಲ್ಲಿ ಕ್ರಮೇಣ ಉಪೇಂದ್ರ, ಪರಶುರಾಮ, ರಾಮ, ಜನಾರ್ದನ, ಮತ್ಸ್ಯ, ಹಯವದನ, ಕಪಿಲ, ನರಸಿಂಹನು, ಇಂದ್ರಾದಿ ಅಷ್ಟ ದಿಕ್ಪಾಲಕರಂ ಪ್ರೇರಿಸುತ ಶಕ್ರಾದಿ ರೂಪಗಳಿಂದ ಇಂಬುಗೊಡುತ್ತಿರುವುದು ಅಂಬುಜನಾಭನ ಮಹಿಮೆಯು.

ಈ ಮೂಲೇಶನು ಪೂರ್ವದಲ್ಲಿ ಪುಣ್ಯ, ಬುದ್ಧಿ, ಅಗ್ನಿ ದಿಕ್ಕಿನ ದಳಕ್ಕೆ ಬರಲು ನಿದ್ರಾಲಸ್ಯ, ಹಸಿವು, ತೃಷೆಯು, ಯಮ ದಿಶಿಯಲ್ಲಿ ಕೋಪಾಟೋಪ, ನಿಋುತಿಯೊಳಿರಲು ಪಾಪಬುದ್ಧಿಯನ್ನು ಕೊಡುವನು. ಪಶ್ಚಿಮ ದಿಕ್ಕಿನಲ್ಲಿ ವಿನೋದ ಹಾಸ್ಯ, ವಾಯವ್ಯದಲ್ಲಿ ಗಮನಾಗಮನ, ಉತ್ತರ ಕುಬೇರನಲ್ಲಿ ಧರ್ಮ ಬುದ್ಧಿ, ಈಶಾನ್ಯವಾದ ಹರನ ಮಂದಿರದಲ್ಲಿ ಬಂದು ಗೋಧನ ಧರಣಿ ಕನ್ಯಾದಾನಾದಿಗಳ ಬುದ್ಧಿಯನ್ನು ಕೊಡುವನು. ಹೃದಯದೊಳಗೆ ಬರಲು ವಿರಕ್ತಿ, ಕೇಶರಿಗಳಲ್ಲಿ ಮೂಲೇಶ ಬರಲು ಸ್ವಪ್ನ, ಲಿಂಗದಿ ಸುಷುಪ್ತಿ, ಕಮಲ

ಕರ್ಣಿಕೆಯಲ್ಲಿ ಬರಲು ಜಾಗ್ರತೆ ಹುಟ್ಟುವುದು. ಅಷ್ಟಭುಜ ನಾರಾಯಣ ಮೂಲೇಶನು ಸುದರ್ಶನ ಮೊದಲಾದ ಆಯುಧಗಳನ್ನು ಧರಿಸಿ, ದಿಶಾಧಿಪತಿಗಳ ಸದನದಲ್ಲಿ ಸಂಚರಿಸುತ್ತ ಈಪರಿ ಬುದ್ಧಿಗಳ ಕೊಡುವನು. ಈ ತೆರದಿ ಸೂತ್ರನಾಮಕ ವಾಯುದೇವರ ಅಂತರ್ಯಾಮಿ ಗಾಯತ್ರೀ ಪ್ರತಿಪಾದ್ಯನು ಗಾತ್ರದಲಿ ನೆಲೆಸಿಹನೆಂದು ತಿಳಿಯದೇ ಬಹಿರಂಗ ತೀರ್ಥಯಾತ್ರೆಯನು ಚರಿಸಿದರೇ ಏನೂ ಫಲವಿಲ್ಲ.

ಹೀಗೆ ಸ್ವರೂಪ ದೇಹಾರಂಭಿಸಿ, ಸ್ಥೂಲದೇಹ ನಾಡಿಗತ ಅಷ್ಟದಳ ಪದ್ಮ ವಿಭವವನ್ನು ಹೇಳಿ, ಉಪ ಸಂಹಾರ ರೂಪದಿಂದ ನಾರಸಿಂಹನು ಸ್ವರೂಪ ದೇಹದಿ ಶರೀರ ನಾಮದಿಂದ ಕರೆಸುವನು. ಹದಿನಾರು ಕಲೆಗಳುಳ್ಳ ಲಿಂಗ ದೇಹದಿ ಪುರುಷನಾಮಕನು. ಅನಿರುದ್ಧ ದೇಹದಿ ಶಾಂತೀ ಪತಿ ಅನಿರುದ್ಧ ದೇಹನು, ಸ್ಥೂಲಕಲೇಬರದಿ ಪ್ರದ್ಯುಮ್ನ ದೇವನು ಪ್ರೇರಿಸುವನು.

ಇನ್ನು ಸ್ಥೂಲ ದೇಹಗತವಾದ, ಮೊದಲಿಗೆ ತ್ವಕ್, ಚರ್ಮ, ಮಾಂಸ, ರುಧಿರ, ಮೇದೋ, ಮಜ್ಜ, ಅಸ್ಥಿಗಳಲ್ಲಿ ನಲವತ್ತೊಂಭತ್ತು ಮರುದ್ಗಣವು ನಿಧನ ಹಿಂಕಾರಾದಿ ಸಪ್ತ ನಾಮಗಳು, ಮತ್ತು ನಲವತ್ತೊಂಭತ್ತು ರೂಪದಿಂದ ಶ್ರೀಹರಿಯು ಶೋಭಿಪನಲ್ಲದೇ, ಈ ಸಪ್ತಧಾತುಗಳಲ್ಲಿಯೇ ಕ್ರಮೇಣ ಅನ್ನಮಯಾದಿ ಕೋಶಗಳಲ್ಲಿ ಸಪ್ತ ಸಾಮಗನಿಪ್ಪನು. ಲಿಪ್ತನಾಗದೇ ತತ್ತನ್ನಾಮದಿಂದ ಕರೆಸುತ್ತ ಕ್ಲಪ್ತ ಭೋಗಗಳೀಯುತ್ತ, ಜೀವರಿಗೆ ಸ್ವಪ್ನ, ಸುಷುಪ್ತಿ, ಜಾಗ್ರತಾದಿಗಳನ್ನು ಕೊಡುವನು. ಮಜ್ಜಾದಲ್ಲಿ ಅಂಗುಲ್ಯಾದಿ ಪರ್ವದಲ್ಲಿ, ಅಸ್ಥಿಗಳಲ್ಲಿ, ಮುನ್ನೂರಾಅರವತ್ತು ರೂಪಗಳಂತೆ ತ್ರಿಸ್ಥಳದಿ—ಹಗಲು ರಾತ್ರೆ, ಸಂಧ್ಯಾ ಒಂದುಸಾವಿರದ ಎಂಭತ್ತು ರೂಪಗಳಿಂದ ದೇವತೆಗಳ ಸಹಿತವಾಗಿ ಕ್ರೀಡಿಸುವನು. ರಮಾರಮಣನು ಕೀಟವಾದ ಹುಳುವು, ಪೇಶಸ್ಕಾರೀ ಕುರುಡೀ ಕುತಾರ ಹಾರುವ ಹುಳದ ಭಯದಿಂದ ಅದನ್ನು ನೆನೆದು, ಅದರಂತೆ ರೂಪ ಮಾತ್ರ ಹೊಂದುವಂತೆ (ಆಸಕ್ತಿ ಬಾರದೇ) ಕೈಟಭಾರಿಯಾದ ಶ್ರೀಹರಿಯ ರೂಪಗಳನ್ನು ಧ್ಯಾನಿಸಿ, ಅಲ್ಪ ಜೀವಿಗಳು ಸಾರೂಪ್ಯ ಮುಕ್ತಿಯನ್ನು ಹೊಂದುವರು. ಈ ಪ್ರಕಾರವಾಗಿ ಮರೆಯದಲೆ ನಿತ್ಯದಲಿ ಪದೇ ಪದೇ ಭಕುತಿಯಿಂದ ಮನದಲ್ಲಿ ಸ್ಮರಿಸಲು ಸಕಲವರ್ಣ ಪ್ರತಿಪಾದ್ಯನಾದ (ಗೋ) ವೇದಪತಿ ವೇದಪ್ರತಿಪಾದ್ಯನು ಸಮೀಪಗನಾಗಿ ತನ್ನ ಅಪರೋಕ್ಷವನ್ನು ಕೊಡುವನೆಂದು ವರ್ಣಪ್ರಕ್ರಿಯಾ ಸಂಧಿಯನ್ನು ಮುಗಿಸಿ,

## ಹತ್ತನೇ ಸರ್ವ ಪ್ರತೀಕ ಸಂಧಿಯಲ್ಲಿ,

"ಪ್ರತೀಕಂ ದೇಹಮುದ್ದಿಷ್ಟಂ" ಸರ್ವ ದೇಹಗಳಲ್ಲಿ ಸರ್ವತ್ರ ಒಳ ಹೊರಗೆ ಶ್ರೀಹರಿಯು ಕರ್ತೃತ್ವಾನುಸಂಧಾನದಿಂದ ಸಕಲ ಕ್ರಿಯೆಯನ್ನು ಶ್ರೀಹರಿಯ ಅಧೀನನಾಗಿ ಮಾಡುತ್ತ ಶ್ರೀಹರಿಗೆ ಸರ್ವ ಸಮರ್ಪಣೆಯು ಸದುಪಾಯವು. ಬ್ರಹ್ಮಾಂಡದಲ್ಲಿರುವ ಸಕಲ ತೀರ್ಥಗಳು ನದಿಗಳು ಪುಣ್ಯ ಕ್ಷೇತ್ರಗಳು. ತದಭಿಮಾನಿ ದೇವತೆಗಳು ದೇಹದಲ್ಲಿಯೇ ಇರುವರು. ಕಾರಣ ನಿಷ್ಕಿಂಚನದಿಂದ ಶ್ರೀಹರಿಯ ಭಕ್ತಿ ಮಾಡದೇ ಡಂಭದಿಂದ ಕಾಮದಿಂದ ಭಕ್ತಿಯಿಲ್ಲದೇ ತಪಾದಿ ಆಚರಿಸಿದರೇ ಶ್ರೀಹರಿಯು ತತ್ತ್ವಾಭಿಮಾನಿಗಳ ದ್ವಾರಾ ವಿಘ್ನ ಮಾಡುವನು. ಪರಬೊಮ್ಮನ ವಿಮಲಾಂಗಾವ ಬದ್ಧರೆನಿಪ ಬ್ರಹ್ಮಾದಿ ತತ್ತ್ವದೇವತೆಗಳು ನಿತ್ಯದಲ್ಲಿ ಹರಿಪದ ಸೇವಿಸುವವರಿಗೆ ಅನುಕೂಲರಾಗಿ ಪಾಪಕೃತ್ಯಕ್ಕೊಳಮಾಡದೆ ಪುಣ್ಯಕೃತ್ಯಗಳನ್ನೇ ಮಾಡಿಸಿ, ಶ್ರೀವಿಲಾಸಾಸ್ಪದ ದಾಸರಿಗೆ ಜಯವನ್ನು ತಂದುಕೊಡುವರು. ಅಪಜಯಾದಿಗಳೆಂದಿಗೂ ಇಲ್ಲ. ಶ್ರೀಹರಿಯ ಪಾದಕಮಲಗಳನ್ನು ಮನದಲ್ಲಿ ನಿಶ್ಚಲ ಭಕುತಿಯಿಂದ ಇಟ್ಟು, ಸಂಸ್ತುತಿಸುವವರಿಗೆ ನವಗ್ರಹಗಳೂ ದೇವತೆಗಳೂ ಬಾಧಿಸದೇ ಆಧಿವ್ಯಾಧಿಯನ್ನು ಪರಿಹರಿಸುತ್ತ ಈಶನಾಜ್ಞೆಯಲ್ಲಿ ಭಕ್ತನ ರಕ್ಷಣೆ ಮಾಡುವರು. ಇನ್ನು ಹರಿಭಕ್ತರಾದ ಯೋಗಿಗಳ ಲಕ್ಷಣ, ಅವರು ಮಾಡತಕ್ಕ ಸಕಲ ಕ್ರಿಯಾವನ್ನು ಬೋಧಿಸುವರು. ಸರ್ವತ್ರ ಹರಿಯು ವ್ಯಾಪ್ತತ್ವ ವ್ಯಕ್ತನಾಗಿರುವನೆಂದೇ ಅರಿತು ನೋಡುವುದೇ ಮಹಾಪೂಜೆಯು. ಭೂಮಿಯಲ್ಲಿದ್ದ ಗೋಷ್ಪಾದೋದಕಗಳು ಅಮಲ ತೀರ್ಥಗಳು. ಮರ, ಅದ್ರಿ, ಧರಾತಳವೆಲ್ಲ ದೇವರಿಗೆಲ್ಲ ಸುಕ್ಷೇತ್ರ, ಸಮಸ್ತ

ಜೀವಗಳು ದೇವರಿಗೆ ಪ್ರತಿಬಿಂಬರಾದ ಪ್ರತಿಮೆ. ಹರಿಭಕ್ತರುಣ್ಣುವುದೇ ದೇವರಿಗೆ ನೈವೇದ್ಯ. ಹಾದಿ ನಡೆಯುವುದೇ ನರ್ತನವೆಂದು, ಹರಿಸ್ಮೃತಿಯುಳ್ಳವನೇ ಯೋಗಿಯಾದ ಶರ್ವವಂದ್ಯನ ಮೂರ್ತಿ ಧ್ಯಾನವುಳ್ಳವರಿಗೆ, ಹರಿಸ್ಮರಣೆಯೇ ವಿಧಿ, ಹರಿ ವಿಸ್ಮೃತಿಯೇ ನಿಷೇಧವೆಂಬ ರೀತ್ಯಾ, ಸರ್ವದೇಶವು ಪುಣ್ಯಮಯವು. ಸರ್ವಕಾಲವು ಪರ್ವಣಿಯು, ಸರ್ವಜೀವರು ದಾನಪಾತ್ರರು. (ಉತ್ತಮರು ದಾನ ಪಾತ್ರರು ಸರ್ವರ ದೇಹದಲ್ಲಿ ಉತ್ತಮರಾದ ಸಕಲ ತತ್ತ್ವೇಶರು, ತದಂತರ್ಯಾಮಿ ಶ್ರೀಹರಿಯು ಮುಖ್ಯ ದಾನಪಾತ್ರನು. ಈ ವಿವಕ್ಷೆಯಿಂದ ಸರ್ವ ಜೀವದಾನ ಪಾತ್ರತ್ವವನ್ನು ಹೇಳಿದ್ದಾರೆ.) ಅಜಾದಿ ಐವ ತ್ತೊಂದು ವರ್ಣೋಚ್ಚಾರವಾದ ಸರ್ವ ಮಾತುಗಳೆಲ್ಲ ಭಗವತ್ಪರವಾಗಿ ಮಂತ್ರವು, ಸರ್ವ ಕೆಲಸ ಗಳೆಲ್ಲ ಹರಿಪೂಜೆಯೆನಿಸುವವು. ದೇಶ, ಕಾಲ, ಜೀವ, ವೇದ, ಕರ್ಮ, ಸರ್ವತ್ರ ಶ್ರೀ ವ್ಯಾಪಾರ ತಿಳಿದು ನಡೆಯುವವನೇ ಯೋಗಿಯು. ಸಮಸ್ತ ತೀರ್ಥಗಳು, ತೀರ್ಥಾಭಿಮಾನಿ ದೇವತೆಗಳು, ನದ್ಯಾದಿಗಳು, ಹರಿಭಕ್ತರ ದೇಹರೋಮಕೂಪದಿ ವ್ಯಕ್ತತಯಾ ತುಂಬಿರುವರು. ತ್ರಿಕೋಟಿ ಮೂರುತಾಂತರ್ಯಾಮಿ ರೂಪ ಗಳಿಂದ ರೋಮಕೂಪದಿ ಎಪ್ಪತ್ತೆರಡು ಸಾವಿರ ನಾಡಿಗತ ರೂಪಗಳಿಂದಲೂ ಶ್ರೀಹರಿ ತಾನು ಕ್ರೀಡಿಸುವ ನೆಂದರಿತ ಜ್ಞಾನಿಗಳೇ ದೇವತೆಗಳು. ಅವರ ಅರ್ಚನೆ ಹರಿಪೂಜೆ. ಬಿಂಬರೂಪನಾದ ಶ್ರೀ ವರನಿಗೆ ಅಭಿಷೇಕವೆಂದು ಆವ ಜಲದಲ್ಲಿ ಮಿಂದರೂ ವ್ಯಾಪ್ತರಾದ ಗಂಗಾದಿ ತೀರ್ಥಾಭಿಮಾನಿಗಳು ಒಲಿದು ನೆಲೆ ಗೊಂಡು ಅಖಿಲಾರ್ಥವನ್ನೀಯುವರು. ಇದನ್ನರಿಯದ ಜೀವರು ಅಮರ ತರಂಗಿಣಿಯಾದ ಗಂಗೆಯ ನ್ಮೆದಿದರೂ ಲೇಶಫಲವಿಲ್ಲವು. ಹೇಗೆ ಪುರುಷ (ನದ) (ವರುಣ.) ಸ್ತ್ರೀನದಿ ಗಂಗಾನದಿಗಳು, ಸಮುದ್ರವನ್ನು ಸೇರುವವರೆಗೆ ಬೇರೆ ಬೇರೆ ನಾಮದಿಂದ ಪರಿಯುತ್ತ ಕಲೆತ ಮೇಲೆ ತಾವು ಆ ನದಿಗಳು ಬೇರೆ ಇದ್ದರೂ ಸಮುದ್ರವೆಂದು ಕರೆಸುತ್ತವೆ. ಹಾಗೆಯೇ ವಿಧಿ ನಿಷೇಧವೆಂಬುವಂಥವುಗಳು ಪರಮಾತ್ಮನನ್ನು ಕಾಣುವ ಪರ್ಯಂತ ಇರುತ್ತವೆ. ಶ್ರವಣ ಮನನ ಗುರೂಪದಿಷ್ಟವಾದ ಮೇಲೆ ಆ ಗುರೂಪದಿಷ್ಟ ಭಗವದ್ರೂಪ ತತ್ಕಾರ್ಯ ಪ್ರತಿಯೊಂದು ಕರ್ಮಗಳು ಭಗವಂತನ ನೋಡುತ್ತ ಮಾಡುವ ಜ್ಞಾನಿಗಳು ಕಾಮ್ಯಗಳನ್ನು ಬಿಡುತ್ತಾರೆ. (ಒಂದು ವಿಧಿತಾ ಮನುಜಾದಿಗಳು—ಎರಡು ವಿಧಿನೀತಾ ರುದ್ರಾದಿಗಳು—ಮೂರು ಸ್ವೇಚ್ಛಾನೀತಾ, ಬ್ರಹ್ಮಾದಿ ಋಜುಗಣದವರು.) ಇಂತು ವಿಧಿ ಬದ್ಧರಾದ ಮನುಷ್ಯೋತ್ತಮಾದಿಗಳು, ಭಗವತ್ಪ್ರಸಾದಾರ್ಥ ವಾಗಿ ನಿಯಮದಿಂದ ಸಕಲ ಕರ್ಮಗಳಲ್ಲಿ ದೇವರ ರೂಪಗಳನ್ನು ಚಿಂತಿಸುತ್ತ ಕರ್ಮಫಲತ್ಯಾಗಮಾಡುತ್ತ "ಅಹರಹಸ್ಸಂಧ್ಯಾಮುಪಾಸೀತ" ಇತ್ಯಾದಿಗಳನ್ನು ಆಚರಿಸುವುದೇ ಕರ್ಮಗಳನ್ನು ಮಾಡುವುದೇ ಕರ್ಮ ತ್ಯಾಗವೆಂದು ಶಾಸ್ತ್ರನಿಯಮವು. ಕಲಿ ಮೊದಲಾದ ಅಖಿಲ ಪಾಪಕರ್ಮ ಪ್ರವರ್ತಕರಾದ ದೈತ್ಯರಲ್ಲಿ ಬ್ರಹ್ಮಾದಿ ದೇವತೆಗಳು ನಿಯಾಮಕರಾಗಿ ಶ್ರೀಹರಿಯಾಜ್ಞೆಯಂತೆ ಅವರವರ ಪಾಪಕರ್ಮವನ್ನು ಮಾಡಿಸುತ್ತ ಜಲರುಹೇಕ್ಷಣನಿಗರ್ಪಿಸುತ್ತ ನಿಶ್ಚಲ ಭಕ್ತಿಜ್ಞಾನ ಪೂರ್ಣರಾದ ತತ್ತ್ವೇಶರು ಜೀವರಲ್ಲಿ ಸುಖಿಸುವರು. ಕ್ರೀಡಾದಿಗುಣ ವಿಶಿಷ್ಟ ಭಗವಂತನ ಸ್ಮರಣೆಯುಳ್ಳ ದೇವತೆಗಳನ್ನು ಪಾಪಕರ್ಮವು ಮುಟ್ಟಲಾರದು. ಹೇಗೆ ಪತಿವ್ರತೆಯಾದ ಸ್ತ್ರೀಯು ತನ್ನ ಪತಿಯೊಡನೆ ರತಿಕ್ರೀಡೆಯಾಡಿ ಸುತರನು ಪಡೆದು ಇಳೆಯೊಳಗೆ ಜಿತೇಂದ್ರಿಯಳೆಂದು ಕರೆಸುವಳೋ, ಅದರಂತೆ ಕೃತಿಪತಿ ಕಥಾಮೃತರಸ ಭೋಜನರತವು ಮಹಾತ್ಮರಿಗೆ ಇತರ ದೋಷಗಳು ಸಂಬಂಧಿಸಲಾರವು. ಅಚ್ಯುತನ ದಾಸರು ನಿರ್ದುಷ್ಟರು. ಸರ್ವೋತ್ತಮ ಹರಿಯೊಬ್ಬ ನನ್ನೇ ಮುಖ್ಯ ಆರಾಧಿಸುವವರು. ಸೂಸಿ ಹರಿವ ನದಿಯ ಹರಿಯೊಳಗೆ ತನ್ನ ಬಲದಿಂದ ಸಾಹಸ ತೋರುವೆ ನೆನ್ನುತ್ತ ಎದುರಾಗಿ ಈಸುವವನು, ಕೈಸೋತು ಮುಳುಗುವನೋ, ಅದರಂತೆ ಆದಿಯಲ್ಲಿ ಜೀವಯೋಗ್ಯತೆ ಯನ್ನು ಕ್ಲುಪ್ತ ಮಾಡಿದುದನ್ನು ತಿಳಿಯದೇ ಹರಿಪರನೆಂದರಿಯದೇ ಅನ್ಯರಾದ ದುಷ್ಟದೇವತೆಗಳನ್ನು ಭಜಿಸುವವನು ಕ್ಲೇಶವೈದುವನು. ನಿಜವು.

ಅಹಂಕರ್ತೃತ್ವಾಭಿಮಾನದಿಂದ ನಾನು ನನ್ನದೆಂಬ ಜಡಮತಿ ಮಂದಮಾನವನು ಸ್ನಾನ, ಜಪ,

ದೇವತಾರ್ಚನೆ, ಸಕಲ ತೀರ್ಥಯಾತ್ರೆ ಪಾತ್ರಾಪಾತ್ರರರಿತು, ಅನ್ನದಾನಾದಿಗಳು ಮಿಂದು ಮಡಿಯುಟ್ಟು, ಮಂತ್ರ ಸ್ತೋತ್ರಪಠಿಸುವುದು ಕಂಡ ನೀರೊಳು ಮುಳುಗಿ ದೇಹವ ದಂಡಿಸಿದರೂ ಫಲವಿಲ್ಲ. ದಂಡ ಕಮಂಡಲವ ಧರಿಸಿ ಯತಿಯೆಂದೆನಿಸಿದರೂ ಫಲವಿಲ್ಲ. ಶ್ರೀಹರಿಯ ಪದ ಪುಂಡರೀಕದಿ ಮನವನರ್ಪಿಸದೇ ಏನು ಮಾಡಿದರೂ ಲೇಶಫಲವಿಲ್ಲ. ಇಂತು ಬಿಂಬರೂಪನಾದ ಶ್ರೀಹರಿಯು ಸರ್ವಕರ್ತ ಸರ್ವವ್ಯಾಪ್ತನೆಂದು ತಿಳಿದು ಸಾಧನ ಮಾಡುವ ಬೆರಗು ಅರುಹಿ.

ಗ್ರಂಥ ಉಪಸಂಹಾರರೂಪವಾಗಿ ಸ್ವಾಹಂಕಾರ ಖಂಡನೆಯ ಪೂರ್ವಕ ಈ ರಹಸ್ಯವಾದ ಹರಿಕಥಾ ಮೃತಸಾರ ಗ್ರಂಥಕ್ಕೆ ಅಧಿಕಾರಿಗಳಾರೆಂಬುದನ್ನು ಹೇಳುತ್ತಾರೆ.

"ಸಶಬ್ದಾಬ್ಧಾ ಗಾಥಾ ನಚ ನಿಗಮ ಚರ್ಚಾಸು ಚತುರಾಃ" ಎಂಬುವ ಶ್ರೀಮಜ್ಜಯತೀರ್ಥರ ಸುಧಾ ವಾಕ್ಯವನ್ನು ನೆನಪಿಗರುಹಲು "ಬುದ್ಧಿ ವಿದ್ಯಾ ಬಲದಿ ಪೇಳ್ದ ಶುದ್ಧ ಕಾವ್ಯವಿದಲ್ಲ. ತತ್ತ್ವಸುಪದ್ಧತಿಗಳನು ತಿಳಿದ ಮಾನವನಲ್ಲ ಬುಧರಿಂದ ‖ ಮಧ್ವವಲ್ಲಭ ತಾನೇ ಹೃದಯದೊಳಿದ್ದು ನುಡಿದಂದದಲಿ ನುಡಿದೆನ | ಪದ್ಯಗಳ ನೋಡದಲೇ ಕಿವಿಗೊಟ್ಟಾಲಿಪುದು ಬುಧರು ‖" ಎಂದು ದಾಸರು ಪೇಳಿರುವ ಬಹಿರರ್ಥವು ಬಹು ಚಮತ್ಕೃತಿ ತೋರುವುದು. ಪೂರ್ವದಲ್ಲಿ ಎರಡನೇ ಸಂಧಿ ಎರಡನೇ ಪದ್ಯ, "ಕಲುಷವಚನಗಳಾದೊಡೆಯು ಬಾಂಬೊಳೆಯಪೆತ್ತನಪಾದ ಮಹಿಮಾಜಲಧಿ ಸೇರಿದುದರಿಂದ ಮಾಣ್ದಪರೇ ಬುಧರು ‖" "ಗಂಗಾಸಂಗೇನ ನೈರ್ಮಲ್ಯಂ, ಸಂಗಮ್ಯಂತೇ ಗುರೋರ್ಗಿರಃ ‖" ಎಂಬುವ ವಚನದಂತೆ ಗಂಗಾಜನಕನ ಪಾದ ಮಹಿಮಾ ಜಲಧಿ ಪೊಕ್ಕ ಮೇಲೆ ಶುದ್ಧ ಕಾವ್ಯವಿದೇಕಲ್ಲ ? ವರ್ಣಾಭಿಮಾನಿ ದೇವತೆಗಳೇ ದಾಸರಿಗೆ ಪ್ರತ್ಯಕ್ಷ ತೋರುವ ಕಾಲದಲ್ಲಿ ಇದರಲ್ಲಿ ಅಪದ್ಧಗಳೆಲ್ಲಿ ? ತಾವು ಉತ್ತಮರು, ತಮ್ಮ ಸ್ವಾಹಂಕಾರ ಖಂಡನವನ್ನು ತಾವು ಮಾಡಿ ಕೊಳ್ಳುವುದುಚಿತವಾದರೂ, ಬುದ್ಧ್ಯಭಿಮಾನಿನೀ ಸರಸ್ವತೀ ವಿದ್ಯಾಜ್ಞಾನಾಭಿಮಾನೀ ವಾಯುದೇವರು, ಇವರುಗಳ ಅನುಗ್ರಹ ಬಲದಿಂದ ಪೇಳ್ದ ಶುದ್ಧ ಕಾವ್ಯವಿದಲ್ಲೇನು ? ಹೌದು ಬುಧರಿಂದ ತತ್ತ್ವ ಸುಪದ್ಧತಿ ಗಳನು ತಿಳಿದ ಮಾನವನಲ್ಲ. ಮನುಜನಲ್ಲವೆಂದರೆ ನಾನು ನಮ್ಮ ಗುರುಗಳು ಉಭಯರು ದೇವತೆಗಳು. ದೇವತೆಗಳ ಜ್ಞಾನ ಶ್ರೀಹರಿಯ ಉತ್ತಮ ಪ್ರಸಾದವಾದ ಶ್ರೀಹರಿಯು ಸಾಕ್ಷಾತ್ಕಾರ. ಸಕಲ ಕರ್ತೃತ್ವದಿ ವಿನಾ ಸ್ವಬುದ್ಧಿ ವಿದ್ಯಾಬಲದಿ ಚರಿಸತಕ್ಕವನಲ್ಲ. ಕಾರಣ ಮಧ್ವವಲ್ಲಭನು ತಾ ನುಡಿದಂದದಲಿ ನುಡಿದರೆ ಇದರಲ್ಲಿ ಅಪದ್ಧಗಳೆಲ್ಲಿಂದ ಬಂದವು ? ಶುದ್ಧ ಕಾವ್ಯವಿದಲ್ಲೇನು ? ಹೌದು. ಕಾರಣ ಬುಧರು ಜ್ಞಾನಿಗಳು ಕಿವಿಗೊಟ್ಟು ಕೇಳುವುದೆಂದು ಪೇಳಿದ ರಹಸ್ಯಾರ್ಥವು.

ಈ ರಹಸ್ಯವಾದ ಮಹಾಕಾವ್ಯಕ್ಕೆ ಅನಧಿಕಾರಿಗಳಾರು ? ಅಧಿಕಾರಿಗಳಾರು ? ವಿದಂತನಿಗೆ ಕಬ್ಬಿನಲ್ಲಿರುವ ರಸರುಚಿ ತೋರಬಹುದೇ ? ಭಾಗ್ಯ ಯೌವನ ಮಬ್ಬಿನಲಿ ಮೈಮರೆತವನಿಗೆ ಲಭ್ಯವಾಗದು. ಹರಿಪಾದಾಬ್ಜದಿ ಹಬ್ಬಿ ಸದ್ಭಕ್ತಿರಸ ಉಂಡು ಉಬ್ಬಿ ಕೊಬ್ಬಿರುವ ಹರಿಭಕ್ತರಿಗಲ್ಲದೆ ಇತರರಿಗೆ ಸೊಗಸದು. ಗರುಡಾರೂಢನಾದ ಶ್ರೀಹರಿಯ ಮಹಿಮೆಯನ್ನರಿಯದ ಮಾನವರಿಗೆ ಇದು ಒಗಟು ಗುಟ್ಟು. ತ್ರಿಗುಣ ವರ್ಜಿತನಾದ ಶ್ರೀಹರಿಯ ಗುಣಗಳ ಪಾಡಿ ಪೊಗಳಿ ಹಿಗ್ಗುವ ಭಾಗವತರಿಗೆ ಹೆಚ್ಚಾಗಿ ಭಕ್ತಿಯಿತ್ತು ರಕ್ಷಿಪುದು ಕಾರಣವೇನೆಂದರೆ:— ಪರಮತತ್ತ್ವ ರಹಸ್ಯವಿದು. ಎಲೈ, ಬ್ರಾಹ್ಮಣಕುಲೋತ್ತಮರಾದ ಹರಿಭಕ್ತಿರತ ಜ್ಞಾನಿಗಳೇ ಕೇಳಿರಿ. ನಿಷ್ಠುರಿಗಳಿಗೆ, ಮೂಢರಿಗೆ, ಪಂಡಿತ ಮಾನಿಗಳಿಗೆ, ಪಿಶುನರಿಗೆ, ಅರಸಿಕರಿಗಿದು ಪೇಳುವುದಲ್ಲ. ಅನವರತ ಭಗವತ್ಪಾದಾರವಿಂದದಲ್ಲಿ ರತಿಯುಳ್ಳ ಜನರಿಗೆ ಸಂತೋಷದಲಿ ಅರುಹುವುದು. ಇದು ಲೋಕವಾರ್ತೆಯಲ್ಲ- ಪರಲೋಕೈಕನ ವಾರ್ತೆಯಿದು. ಕಮಲದಲ್ಲಿರುವ ರಸವು ಭ್ರಮರವ ಸ್ವೀಕರಿಸುವಂತೆ, ಹರಿಭಕ್ತರಿಗೆ ಸೊಗಸಿಸುವುದಲ್ಲದೇ ಜಲಚರ ಭೇಕ (ಕಪ್ಪೆ) ಸಮಾನರಾದ ಕೆಟ್ಟ ಜನರು ಇದನ್ನು ಅರಿಯಲಾರರು. ಶ್ರೀಹರಿಯು ಸ್ವಪ್ರಯೋಜನರಹಿತನಾದರೂ ಜೀವರುಗಳ ಮೇಲಿನ ಮಹಾಕರುಣೆಯಿಂದ ಸಕಲೇಷ್ಟ ಪ್ರದಾ ಯಕನಾಗಿ ಸರ್ವರ ನಿಜಗತಿಯನ್ನು ಕೊಡುವನು. ಸರ್ವ ಗುಣಪೂರ್ಣನು, ಅಪ್ರಮೇಯನು, ಜನನ ಮರಣ

ವರ್ಜಿತನು. ಸರ್ವಜ್ಞನು, ವಿಶ್ವಾತ್ಮನು, ಘೃಣೀ ಮಹಾ ಕರುಣಿಯು. ಸೂರಿಗವ್ಯನಾದುದರಿಂದ ಸೂರ್ಯ ಪ್ರಕಾಶದಂತೆ ಸಾಧನ ಜೀವರುಗಳ ಯೋಗ್ಯತೆಯಂತೆ ತನ್ನ ರೂಪ ಪ್ರಕಾಶ ತೋರುವ ಅನಂತ ಮಹಿಮನು. ಲಕ್ಷ್ಮೀ ದೇವಿಯರಿಂದ ಪೂಜಿತ ಪಾದಪದ್ಮನು. ಹೇ ದೇವತೆಗಳಿಗೆ ಒಡೆಯನಾದ ರಾಜನೇ, ನೀನು ಜೀವರ ಉದ್ಧಾರಕ್ಕೋಸ್ಕರ ಇಂತು ಜಗತ್ತನ್ನು ಸೃಜಿಸಿ ಪಾಲಿಸಿ ನಿಜಗತಿಕೊಡುವ ನಿನ್ನ ಲೀಲೆಗಳು ಜಯಪ್ರದವಾದ ಕಾರಣ, ಮತ್ಸ್ಯ ಕೂರ್ಮಾದಿ ದಶೇಂದ್ರಿಯ ನಿಯಾಮಕನೇ, ಜಯ ಜಯವಿರಲಿ. ಇಂತು ಮನದಲ್ಲಿ ಜೀವರ ಚಿತ್‌ಸ್ವರೂಪದಲ್ಲಿಪ್ಪ ಸಚ್ಚಿದಾನಂದ ಮೂರ್ತಿ ಬ್ರಹ್ಮಕರಾರ್ಚಿತಾಂಘ್ರಿ ಸರೋಜ, ದೇವತೆಗಳಿಗೆಲ್ಲಾ ಉತ್ಕೃಷ್ಟಮಂಗಳಪ್ರದ, ಮಧ್ವಮನ ಮಂದಿರ, ಮಧ್ವಾಂತರ್ಯಾಮಿ, ಸ್ವಾಮಿಯೇ, ನೀನು ಜಗತ್ತಿನಲ್ಲಿ ವ್ಯಾಪಿಸಿದ ಜಗನ್ನಾಥ ವಿಠ್ಠಲನೇ. ಜೀವರಂತಗದಿ ಲವಕ್ಷಣವಾದರೂ ಚ್ಯುತನಾಗದೇ ನಿಚ್ಚ ನೆಚ್ಚಿದ ಜನರನ್ನು ಬಿಡದೆ ಕಾಡ್ಗಿಚ್ಚುಗೊಂಡಾರಣ್ಯದಲ್ಲಿ ಗೋವುಗಳನ್ನು ಗೋಪಾಲರುಗಳನ್ನು ಕಾಯ್ದ ಕೃಷ್ಣನೇ, ಅಚ್ಯುತನೆನಿಸಿ ಸಚ್ಚಿದಾನಂದ ರೂಪದಿಂದಲೇ ಭವಗ್ರಸ್ತರಾದ ಜೀವರನ್ನು ಪೊರೆದು ಮುಕ್ತಿಯನೀವೆ. ಎಂದು ಹತ್ತನೇ ಸಂಧಿಯಿಂದ ಬಿಂಬರೂಪನಾದ ಶ್ರೀಹರಿಯ ಲೀಲೆಯನು ಕೊಂಡಾಡಿಹರು.

**"ದಶಸು ಸಂಧಿಯೊಳಿಪ್ಪ ಶ್ಲೋಕಗ । ಳೆಸೆವ**
**ನವರತ್ನಾದಿ ಮಣಿಗಳ । ಪ್ರಸರ ಮಾಣಿಕ**
**ಜ್ಞಾನ ಭಕ್ತಿಗಳೆಂಬ ಕರದಿಂದಾ ॥**
**ಎಸಗಿ ನವರತ್ನಗಳ ಮೂಟೆಗ**
**ಳಸಮ ಶ್ರೀಜಗನ್ನಾಥವಿಠಲನ ।**
**ಬಿಸಜಪಾದಕ್ಕಿಡಲು ಸೇವೆಯನೊಡನೆ ಕೈಕೊಂಬ ॥"**

ಎಂದು ಶ್ರೀಜಗನ್ನಾಥದಾಸಾರ್ಯರ ಶಿಷ್ಯರೂ ಅಪರೋಕ್ಷಿಗಳಾದ ಶ್ರೀ ಮನೋಹರ ವಿಠ್ಠಲರ ವಚನವಿದೆ. ಹೀಗೆ ಶ್ರೀಹರಿಯು ಸರ್ವತ್ರ ವ್ಯಾಪ್ತನು, ಜೀವರಿಗೆ ಸೃಷ್ಟಿಯಲ್ಲಿ ತಂದು ಲಿಂಗ ಉಪಚಯದ್ವಾರಾ ಬಂಧಿಸಿ, ಪ್ರಾಕೃತ ರಸ ಭೋಜನವೀಯಲು ತನ್ನ ವಿಭೂತಿರೂಪಗಳನ್ನಿಟ್ಟು, ಲಿಂಗ, ಅನಿರುದ್ಧ, ಪ್ರಾಕೃತ, ಸ್ಥೂಲ, ದೇಹವಿತ್ತು ಸಾಧನ ಮಾಡಿಸುವನು. ಆ ಶರೀರಗಳ ಉತ್ಪತ್ತಿ, ಪಾಲನೆ (ಸ್ಥಿತಿ) ಅಲ್ಲಿಪ್ಪ ಭಗವಂತನ ವಿಶಾಲ ಚರಿತೆ. ಜೀವನ ಸ್ವರೂಪ, ಅಲ್ಲಿಪ್ಪ ಮಹಾ ವಿಭವ. ಲಿಂಗ ಬಿಡುಗಡೆಯಾಗಲು ಭಗವದಧೀನ, ಸರ್ವ ಸಮರ್ಪಣೆಯೆಂಬ ಸದುಪಾಸನೆಯಂಗಳಂ ಪೇಳುತ್ತ ಮುಂದೆ ಹನ್ನೊಂದನೆಯ ಸಂಧಿಯಿಂದ ಮೂವತ್ತೆರಡು ಸಂಧಿಯವರೆಗೆ ಸವಿಸ್ತರವಾಗಿ ಧ್ಯಾನೋಪಾಸನೆಯ ಕ್ರಮವನ್ನು ಹೇಳುವರು. ಜ್ಞಾನಭಕ್ತಿ ವಿರಕ್ತಿಯನು ಸಂಪಾದಿಸಿ ಭಗವತ್ಪ್ರಸಾದಕ್ಕೆ ಧ್ಯಾನೋಪಾಸನೆಯೇ ಮುಖ್ಯ ಕಾರಣವು.

## ೧೧ನೆಯ ಸಂಧಿ

ಜೀವನಿಗೆ ಬಂಧಿಸಿದ ಅಷ್ಟ ಪ್ರಕೃತಿ "ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವಚ । ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿ ರಷ್ಟಧಾ ॥" ಜಡವಾದ ಭೂ, ಉದಕ, ಅನಲ, ಅನಿಲ, ಆಕಾಶ, ಮನಸ್ಸು, ಬುದ್ಧಿ, ಅಹಂಕಾರವಾದ ಜಡಪ್ರಕೃತಿ, ಬಿಡುಗಡೆಗೋಸುಗ ಹನ್ನೊಂದನೆಯ ಸಂಧಿಯಲ್ಲಿ ಧ್ಯಾನ ವಿಷಯವನ್ನು ಸವಿಸ್ತಾರವಾಗಿ ಹೇಳಿ,

## ೧೨ನೆಯ ಸಂಧಿ

ಇಂಥ ಪ್ರಕೃತಿ ನಿವಾರಣೆಗೋಸುಗ ನಾಡಿಯಲ್ಲಿಪ್ಪ ವಿಸ್ತಾರ, ಆ ನಾಡಿಗಳಲ್ಲಿ ಭಗವದುಪಾಸನೆಯನ್ನು ಹನ್ನೆರಡನೆಯ ಸಂಧಿಯಲ್ಲಿ ಹೇಳಿದರು.

## ೧೩ನೆಯ ಸಂಧಿ

ಇಂಥ ಪ್ರಕೃತಿಯಲ್ಲಿ ಐವತ್ತೊಂದು ವರ್ಣಗಳು ಓತಪ್ರೋತ ವ್ಯಾಪ್ತಗಳಾದ ಕಾರಣ ಅವುಗಳ ಜ್ಞಾನ ನಾಮಾಭಿಮಾನಿ ಉಷಾ, ಮಂತ್ರಾಭಿಮಾನಿ ಸ್ವಾಹಾ, ಆರಂಭಿಸಿ, ವೇದಾಭಿಮಾನಿಗಳಾದ ಭಾರತೀ,ವಾಣೀ, ವಾಯು, ಬ್ರಹ್ಮರ ತನಕ, ಹದಿನಾರು ಜನರ ಅನುಗ್ರಹಪಡೆದು ನಾಮೋಚ್ಚಾರ ಹೇಗೆ ಮಾಡಿದರೆ ವೇದೋಪ ನಿಷತ್ ಜ್ಞಾನವಾಗುವುದೆಂಬ ಬಗೆ ತೋರಿ, ಹದಿಮೂರನೆಯ ಸಂಧಿಯಲ್ಲಿ ನಾಮೋಚ್ಚಾರಣೆಯ ಸಂಧಿಯಲ್ಲಿ ಹೇಳಿರುವರು.

## ೧೪ನೆಯ ಸಂಧಿ

ಇಂಥ ಜ್ಞಾನವಾದ ಮೇಲೆ ವಸ್ತುಗತ್ಯಾ ಜೀವ ಜೀವರಿಗೆ ಪರಸ್ಪರ ಸಂಬಂಧವಿಲ್ಲದೆ ಭೇದವಿದ್ದಾಗ್ಯೂ ಋಣರೂಪನಾದ ಶ್ರೀಹರಿಯ ಇಚ್ಛಾಮಾತ್ರದಿಂದ ಪಿತೃ, ಪಿತಾಮಹ, ಪ್ರಪಿತಾಮಹ ಇತ್ಯಾದಿ ಸಂಬಂಧ ಗೈಸಿ, ಪಿತೃಋಣದಿಂದ ಮುಕ್ತನನ್ನಾಗಿಮಾಡಿ ಜೀವರಿಗೆ ಪರಸ್ಪರ ಭೇದವು ದೃಢವಾಗಿ ತೋರಲು, ಜೀವನ ಪ್ರಕ್ರಿಯಾ (ಪಿತೃಗಣ) ಜೀವ ಜೀವರಲ್ಲಿ ಉಪಾಸನೆಯ ಕ್ರಮುವನ್ನು ತೋರಿ ಮುಂದೆ—

## ೧೫ ನೆಯ ಸಂಧಿ

ಕಾಲಾತೀತನಾದ ಭಗವಂತನು ಶ್ವಾಸರೂಪದಿಂದ ಜೀವರನ್ನೆಲ್ಲಾ ಕಾಲ ಬದ್ಧರನ್ನಾಗಿ ಮಾಡಿದ್ದು, ಅದರ ಜ್ಞಾನದವಿನಾ ಬಿಡುಗಡೆಯಾಗುವುದಿಲ್ಲವೆಂದು ಸೂಕ್ಷ್ಮ, ಅಣು, ಕಾಲ, ಆರಂಭಿಸಿ ಮಹಾಕಾಲದ ವರೆಗೆ ಶ್ರೀಹರಿಯಕಾಲ ಪ್ರೇರಕತ್ವ ನಿಯಾಮಕತ್ವವನ್ನು ತಿಳಿದು ಉಪಾಸನೆ ಧ್ಯಾನಗೈದರೆ ದೇಶಕಾಲಗಳ ಸಂಬಂಧ ಬಾಧೆ ನಿವಾರಣೆಯಾಗುವುದೆಂದು ಶ್ವಾಸ ಸಂಧಿಯಂ ಪೇಳಿ, ಹದಿನೈದನೇ ಸಂಧಿಯನ್ನು ಮುಗಿಸಿ,

## ೧೬ ನೆಯ ಸಂಧಿ

ಮುಂದೆ ಜೀವರು ಅನಾದಿಕರ್ಮದಿಂದ ಬದ್ಧರು, ಅಸ್ವತಂತ್ರರು, ಶ್ರೀಹರಿಯೇ ಸರ್ವಕರ್ತಾ, ಕಾರಯಿತಾ, ಸ್ವಗತ ಸ್ವತಂತ್ರ, ವಿಭಜನ, ಶ್ರೀಹರಿ ತನ್ನೊಳಿಪ್ಪ ಅಪಾರ ಪ್ರಕೃತಿ ಸ್ವಾತಂತ್ರ್ಯ ಗುಣಗಳನ್ನು ಜೀವಯೋಗ್ಯತೆಯಂತೆ ಹಂಚಿ ಹಾಕಿದನು.

## ೧೭ ನೆಯ ಸಂಧಿ

ತಾನು ಜೀವರಿಗೆ ದತ್ತ ಸ್ವಾತಂತ್ರ್ಯರೂಪ ಶಕ್ತಿಯಿತ್ತು ಅವರಿಂದ ಸಕಲ ಕ್ರಿಯಾ ಮಾಡಿಸಿ ಜೀವರಿಗೆ ಅನುಭೋಗ ತಂದೀವನು. ವಾಸ್ತವದಲ್ಲಿ ಜೀವನು ಅಸ್ವತಂತ್ರನು ಶ್ರೀಹರಿಯ ಅಧೀನನಾಗಿರಲು ಜೀವನಿಗೇಕೆ ಸುಖದುಃಖವೆಂದರೆ ಅಹಂಕಾರ ಮಮಕಾರಮೂಲಕ ಜೀವನಿಗೆ ಸುಖದುಃಖಾದಿಗಳ ಲೇಪವು ದೇಹಕ್ಕೆ ಹೊರ್ತಾಗಿ ಜೀವನಿಗೆ ಲೇಪವಿಲ್ಲ. "ಜೀವಾನಾಂ ಪುಣ್ಯ ಪಾಪಕರ್ಮ ಶಕ್ತ್ಯಭಾವಾತ್, ಜೀವಸ್ಯೈದಂ ನಯುಕ್ತಂ । ಯಃಕರ್ತಾ ಸಏವ ಭೋಕ್ತ್ರೇತಿ ನ್ಯಾಯಾತ್ ॥ ಹರೇಃ ಪುಣ್ಯಪಾಪ ಫಲ ಭೋಕ್ತೃತ್ವಂ ವಾಚ್ಯಂ । ತದುಕ್ತ ಮೇವಪೂರ್ಣಾನಂದಸ್ಯ ಹರೇಃ ಭೋಕ್ತೃತ್ವಂ ನಾಮ ತತ್ತತ್ಕರ್ಮ ಜನ್ಯ ಫಲ ಸಾಕ್ಷಾತ್ಕಾರ ಏವ ಭೋಕ್ತೃತ್ವ ಶಬ್ದಾರ್ಥಃ । ನ ಕರ್ಮಜನ್ಯರಸ ವಿಕಾರತ್ವ ರೂಪೋಽರ್ಥಃ । ಕರ್ಮಜನ್ಯ ಸ್ಥೂಲರಸವಿಕಾರಃ ಸ್ಥೂಲ ದೇಹಸ್ಯ, ಸೂಕ್ಷ್ಮ ಪ್ರಾಕೃತ ರಸವಿಕಾರವತ್ಸ್ವನಿರುದ್ಧ ದೇಹಸ್ಯ, ಸೂಕ್ಷ್ಮತರ ರಸ ವಿಕಾರಸ್ತು ಲಿಂಗದೇಹಸ್ಯ, ತತ್ತದ್ವಿಕಾರ ಸಾಕ್ಷಾತ್ಕಾರಃ ಜೀವಸ್ಯೇತಿ ಸಿದ್ಧಾಂತಃ ॥ ಪೂರ್ವೋಕ್ತ ಸ್ಥೂಲರಸಮಾರಭ್ಯ ಜೀವಸ್ವರೂಪಭೂತ ತೇಜೋಮಯ ರಸಾಂತಸ್ಥ ಬಿಂಬರೂಪ ರಸಸ್ಯ, ಸಂಶ್ಲೇಷೈಕ್ಯತ್ವಂ, ಸ್ಥೂಲಾದಿ ರಸ ಸಾಕ್ಷಾತ್ಕಾರತ್ವಂ ಚ, ಉಭಯ ಭೋಕ್ತೃತ್ವಂ ಚ, ಹರೇಯುಕ್ತ ಮೇವೇತಿ ಜ್ಞಾತವ್ಯಂ ತದುಕ್ತಂ ಋತಂ ಪಿಬಂತೌ ಸುಕೃತಸ್ಯ ಲೋಕೇ, ಗುಹಾಂ ಪ್ರವಿಷ್ಟೌ ಪರಮೇ

ಪರಾರ್ಧೇ ! ಛಾಯಾ ತಪೌ ಬ್ರಹ್ಮವಿದೋವದಂತಿ ಪಂಚಾಗ್ನಯೋ ತ್ರಿನಾಚಿಕೇತಾಃ || ಶೌಕಾವಿತಿ ಪ್ರತೀಯತೆ || ಓಂ ಗುಹಾಂ ಪ್ರವಿಷ್ಟಾವಾತ್ಮಾನೋಹಿ ತದ್ದರ್ಶನಾತ್ ಓಂ || ತದುಕ್ತಂ ಭಾಷ್ಯೇ ಆತ್ಮಾಂತ ರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ | ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮಿತಿ || ಅನಶ್ನನ್ನನ್ಯೋ ಅಭಿಚಾಕಿಶೀತೀತಿ ಶ್ರುತೇಃ | ಸ್ಥೂಲರಸಸಾಕ್ಷಾತ್ಕಾರ ಏವ ಅರ್ಥಃ || ನನು ಸಂಶ್ಲೇಷೈಕ್ಯಾರ್ಥಃ | ಅನೇನ ಸ್ವಗತ ಸ್ವಾತಂತ್ರ್ಯ ದತ್ತ ಸ್ವಾತಂತ್ರ್ಯಾಖ್ಯರೂಪದ್ವಯಂ ಹರೇರೆವ ನಜೀವ ಸ್ಯೇತ್ಯರ್ಥಃ || ಅನಾದಿ ನಿತ್ಯತ್ವೇನ ವಿದ್ಯಮಾನಕರ್ತೃತಾ ಸರ್ವ ಜೀವೇಷು ಹರಿಣಾ ಸಂಸ್ಥಿತಾ ಸ್ಥಾಪಿತೇತ್ಯರ್ಥಃ | ತದುಕ್ತಂ ತಾತ್ಪರ್ಯ ನಿರ್ಣಯೇ—ಕರ್ತೃತಾ ಜೀವಸಂಸ್ಥಾಯಾ ಅನಾದಿಸಿದ್ಧಾ ಸರ್ವಜೀವೇಷು ಇತ್ಯಾದಿ ||" ಎಂದು ಛಲಾರಿ ಆಚಾರ್ಯರು ತ್ರಿವಿಧ ಜೀವ ಕರ್ತೃತ್ವ ವಿಚಾರದಲ್ಲಿ ಪೇಳಿರುವರು. ಹೀಗೆ ಸಕಲ ಕರ್ಮ ಕರ್ತಾ, ಕಾರಯಿತಾ, ಶ್ರೀಹರಿ ಬಿಂಬನೆಂಬೋ ಜ್ಞಾನ ಸಂಪಾದಿಸಿ ಕರ್ಮ ಬಿಡುಗಡೆ ಹೊಂದಲು ಇದೇ ಉಪಾಯ ವೆಂದು ಜಡವಾದ ಕರ್ಮದಲ್ಲಿ ಕರ್ಮ ತಾರಕನ ಕ್ರಿಯೋಪಾಸನೆಯನ್ನು ಹೇಳಿ,

## ೧೮ ನೆಯ ಸಂಧಿ

ಹದಿನೆಂಟನೆಯ ಸಂಧಿಯಲ್ಲಿ ಸಮಸ್ತ ಜೀವಿಗಳ ಬಿಂಬಸ್ವರೂಪಹೇಳಿ ಬಿಂಬೋಪಾಸನೆ ಕ್ರಮವನ್ನು ಸವಿಸ್ತರ ಹೇಳುತ್ತ "ಹೃದಯಸ್ಥಹರೇ ಮೂರ್ತಿ ಜೀವೋ ಯತ್ರ್ಪ್ರತಿ ಬಿಂಬಗಃ" | ಎಂಬುವಂತೆ ಜೀವ ಹೃತ್ಕಮಲವಿರಾಜಿಪ ಬಿಂಬಲಕ್ಷಣ ಗುಣರೂಪ ಕ್ರಿಯೋಪಾಸನೆಯನ್ನು ಹೇಳಿದರು. ಇಲ್ಲಿಯವರೆಗೆ ಜಡಪ್ರಕೃತಿನಾಡಿ, ವೇದ, ಜೀವ, ದೇಶ, ಕಾಲ, ಕರ್ಮಗಳಲ್ಲಿ ನಿಯಂತೃನಾದ ಶ್ರೀಹರಿಯುಪಾಸನೆಯಲ್ಲದೇ ಬಿಂಬೋಪಾಸನೆ ಕ್ರಮವನ್ನು ಸವಿಸ್ತಾರ ರಚಿಸಿ, ಇನ್ನು ಮುಂದೆ ಅತಿರಹಸ್ಯತರವಾದ ಚಿತ್ರವಿಚಿತ್ರ ಉಪಾಸನೆಯ ಕ್ರಮವನ್ನು ಹತ್ತೊಂಭತ್ತನೇ ಸಂಧಿಯಾರಂಭಿಸಿ ಮೂವತ್ತೆರಡನೇ ಸಂಧಿಯ ಪರ್ಯಂತ ಹೇಳುವರು. ಇದೆಲ್ಲಾ ಶ್ರೀವಿಜಯದಾಸರ ಸುಳಾದಿಗಳ ಅರ್ಥವೇ ಇರುವುದು. ಸದ್ಗುರುಗಳಿಂದ ವಿಶೇಷವಾಗಿ ತಿಳಿಯುವುದು.

## ೧೯ ನೆಯ ಸಂಧಿ

ಹೀಗೆ ಹೃದ್ಗತ ಬಿಂಬನಾದ ಪರಮಾತ್ಮನು ಶ್ರೀ ಭೂದೇವಿಯರಿಂದ ಆಲಂಗಿತನಾಗಿ ವಿಧಿ ಭವಾದಿ ಗಳಿಂದ ಸಮಾರಾಧಿತನಾದವನು ದೇಹದಲ್ಲಿ ಅಲ್ಲದೇ ಜಗದಿ ಅಂತರಂಗ ಬಹಿರದಿ ವ್ಯಾಪ್ತನಾಗಿಹನು. ಈತನು ಅನಂತ ಕಲ್ಯಾಣ ಗುಣಪರಿಪೂರ್ಣನು. ಲಕ್ಷ್ಮ್ಯಾದಿಗಳು ಅನಂತಾನಂತ ಗುಣ ಹೀನರು. ಸ್ವರೂಪಾರಂಭಿಸಿ ಸ್ಥೂಲ ದೇಹಗತ ಬ್ರಹ್ಮಾದಿ ಮನುಷ್ಯೋತ್ತಮರ ಪರ್ಯಂತ ಗುಣತಾರತಮ್ಯವನ್ನರಿತು ಗುಣೋಪಾಸನೆಮಾಡುತ್ತ ಅವರೋಹಣ ಗುಣತಾರತಮ್ಯ ಹೇಳಿ,

## ೨೦ ನೆಯ ಸಂಧಿ

ದೇಹದ ಬಹಿರದಲ್ಲಿ ಜಗತ್ತಿನಲ್ಲಿ ಸ್ಥೂಲಕಾರ್ಯ ಪ್ರವರ್ತಕರಾಗಿ ಸ್ಥೂಲದೇಹವನ್ನು ಧರಿಸಿದ ಸ್ಥಾವರ ಜೀವರಾರಂಭಿಸಿ ಬ್ರಹ್ಮ, ರಮಾ ನಾರಾಯಣರ ಪರ್ಯಂತ ಅವರೋಹಣ ತಾರತಮ್ಯೋಪಾಸನೆಯಂ ಪೇಳಿರುವರು.

## ೨೧ ನೆಯ ಸಂಧಿ

ಹೀಗೆ ತಾರತಮ್ಯ ಉಪಾಸನೆಮಾಡಲು ಶ್ರೀಹರಿಯು ಸಂಚಿತಾಗಾಮಿ ಕರ್ಮಗಳನ್ನು ನಾಶಮಾಡಿ ತನ್ನ ಸಾಪರೋಕ್ಷ್ಯವನ್ನೀಯುವನು. ಕಾರಣ ಇಲ್ಲಿ ಇಪ್ಪತ್ತೊಂದನೇ ಸಂಧಿಯಲ್ಲಿ ಕರ್ಮ ವಿಮೋಚನ ಪೂರ್ವಕ ಭಗವದ್ಗುಣಾತಿಶಯವಂ ಪೊಗಳಿ ಸಂಚಿತಾಗಾಮಿ, ನಾಶವಾಗಲು,

## ೨೨ ನೆಯ ಸಂಧಿ

ಅಪರೋಕ್ಷದೆಶೆಯಲ್ಲಿ ಮಾಡಿದ ಕರ್ಮಗಳು ಭಕ್ತರಿಗೆ ಹತ್ತವು. ಎಂಬುವ ಈ ಪ್ರಮೇಯ ದಾರ್ಢ್ಯ ಕ್ಕಾಗಿ ಭಕ್ತಾಪರಾಧ ಸಂಧಿಯನ್ನು ಹೇಳಿರುವರು.

## ೨೩ ನೆಯ ಸಂಧಿ

ಹೀಗೆ ಉಪಾಸನಾ ಮಾಡುವ ಅಧಿಕಾರಿಯು ಜಗತ್ತಿನಲ್ಲಿರುವ ಶ್ರೀಹರಿ ಲಕ್ಷ್ಮೀ ಬ್ರಹ್ಮಾದಿಗಳ ಅಂಶ ಅವತಾರಗಳಗೂ ಇರುವ ಭೇದಾ ಭೇದವನ್ನು ಚಿಂತಿಸಿ ಪ್ರತಿಯೊಂದು ಅಂಶ, ಅವತಾರ ಆವೇಶ ರೂಪಗಳಲ್ಲಿ ನಿಯಂತನಾದ ಶ್ರೀಹರಿಯನ್ನು ಐಕ್ಯ ಚಿಂತಿಸಲು ಬೃಹತ್ತಾರತಮ್ಯ ಸಂಧಿಯನು ಹೇಳುತ್ತ,

## ೨೪ ನೆಯ ಸಂಧಿ

ಮುಂದೆ ಬ್ರಹ್ಮಾದಿ ಸಮಸ್ತ ಜೀವರ ಸಾಧನ ಮಾಡತಕ್ಕ ಕಾಲ, ಕಲ್ಪ, ಅವರವರ ಸ್ವರೂಪ ಬಿಂಬೋ ಪಾಸನೆ, ಲಕ್ಷಣ, ಕಾಂತ್ಯಾದಿಗಳನ್ನು ವರ್ಣಿಸಿ, ಮುಂದೆ ಇಂಥ ಎಲ್ಲ ಅಂಶ, ಅವತಾರ, ಆವೇಶ, ರೂಪಗಳಿಗೂ ಮೂಲರೂಪಕ್ಕೂ ಏಕೀಕರಣ ಮಾಡುತ್ತಾ,

## ೨೫ ನೆಯ ಸಂಧಿ

ಆ ಕಾಲದಲ್ಲಿ ಸರ್ವ ಸ್ವತಂತ್ರವೂ ಶ್ರೀಹರಿಯ ಆಧೀನವೆಂದು ತಿಳಿದು ಶ್ರೀಹರಿಯ ಮಹಿಮೆ ರೂಪವಾದ ಕ್ರೀಡೆಯನ್ನು ಹಾಡು ಹಾಡುತ್ತ ಪಾಡುತ್ತ ನಲಿದಾಡುತ,

## ೨೬ ನೆಯ ಸಂಧಿಯಲ್ಲಿ

ಶ್ರೀಹರಿಯ ಎಲ್ಲ ರೂಪಗಳು "ಶ್ವೇತದ್ವೀಪಗತೋಽಹ್ಯಾತ್ಮಾ ಜೀವ ಹೃತ್ಪದ್ಮೇಷು ವ್ಯವಸ್ಥಿತಃ | ತಯೋ ರೈಕ್ಯಂ ವಿಜಾನೀಯಾತ್ ಜೀವ ಹೃದ್ಪದ್ಮಗಸ್ಯ ಚ || ಶರೀರ ಸರ್ವನಾಡೀಷು ನಿವಿಷ್ಟಾನಾಂಚ ವೈ ಹರೇಃ | ಬ್ರಹ್ಮಾಂಡಾಂತರ್ಬಹಿಸ್ಥಾನಾಂ ರೂಪಾಣಾಮಪಿ ಸರ್ವಶಃ || ಆತ್ಮ ಹೃತ್ಪದ್ಮಗೇ ನೈಕ್ಯಂ ಚಿಂತನಂ ಪರಮಾರ್ಚನಂ ||" ಮನಸ್ಮೃತಿ. ಎಂಬುವ ವಚನಾನುಸಾರ ಶ್ವೇತದ್ವೀಪಗತನಾದ ಪರಮಾತ್ಮನಲ್ಲಿ ಏಕೀ ಭಾವವಂ ಚಿಂತಿಸಲು ಅಲ್ಲಿಪ್ಪ ಹರಿಯಾರಂಭಿಸಿ ಎಲ್ಲ ತತ್ತ್ವೇಶರಲ್ಲಿಪ್ಪ ರೂಪಗಳನ್ನು ಐಕ್ಯ ಚಿಂತಿಸಲು ಅವರೋಹಣ ತಾರತಮ್ಯವನ್ನು ಸೂಚಿಸಿ,

## ೨೭ ನೆಯ ಸಂಧಿ

ಆ ಶ್ವೇತ ದ್ವೀಪಗತ ಮೂರ್ತಿಯೇ ಸೂರ್ಯ ಮಂಡಲಸ್ಥ. ಪರಮ ಗುರುಗಳಾದ ವಾಯು ದೇವರಲ್ಲಿ ಚಿಂತಿಸಲು ಇಪ್ಪತ್ತೇಳನೇ ಅನುಕ್ರಮಣಿಕೆ ತಾರತಮ್ಯ ಸಂಧಿಯನ್ನು ರಚಿಸಿ, ಶ್ರೀಮದಾಚಾರ್ಯರ ಮತಾನು ಯಾಯಿಗಳಾರಂಭಿಸಿ, ಲಕ್ಷ್ಮೀನಾರಾಯಣರ ಪರ್ಯಂತ ಒಂದೇ ಪದ್ಯದಲ್ಲಿ ಹೇಳಿ ಉಳಿದ ನಾಲ್ಕು ಪದ್ಯಗಳಿಂದ ವಾಯ್ವಂತರ್ಯಾಮಿ ಶ್ರೀಹರಿಯನ್ನು ಕೊಂಡಾಡಿ, ಆ ಪರಮಗುರುಗಳಾದ ಆನಂದ ತೀರ್ಥಗತ ಬಿಂಬನನ್ನು,

## ೨೮ ನೆಯ ಸಂಧಿ

ಸ್ವಗುರುಗಳಾದ ಗಣೇಶಾವತಾರರಾದ (ಶ್ರೀಗೋಪಾಲದಾಸರಲ್ಲಿ) ಚಿಂತಿಸಲು, ಮತ್ತು ಭಗವದುಪಾಸ ನಾಕ್ಕೆ ಬಂದ ವಿಘ್ನ ಪರಿಹರಿಸಿ ಚಿತ್ತೈಕಾಗ್ರತೆಯಾಗಲು ಸ್ವಗುರು (ಗಣೇಶನ ಸ್ತೋತ್ರ) ಮಾಡಿರುವುದಲ್ಲದೇ ಈ ಗ್ರಂಥಕ್ಕೆ ವಿಘ್ನವೆಲ್ಲಿಂದ ಬಂತು. ಈ ರಹಸ್ಯ ಉಪಾಸನೆಯನ್ನು ಸ್ವಗುರು ಬಿಂಬನಲ್ಲಿ ಕರೆತಂದು ಐಕ್ಯ ಚಿಂತಿಸುವ ಕ್ರಮವನ್ನು ಶ್ರೀವಿಜಯರಾಯರೇ ಸೂಚಿಸಿರುವರು. ಇದಕ್ಕೆ ಕಾರಣ ಇಪ್ಪತ್ತೆಂಟನೇ ಸಂಧಿಯಲ್ಲಿ ಗಣೇಶನ ಸ್ತೋತ್ರಮಾಡಿದರು.

## ೨೯ನೆಯ ಸಂಧಿ

ಇಂಥ ಸ್ವಗುರುಗತನಾದ ಬಿಂಬನನ್ನು ತನ್ನ ಸ್ಥೂಲ ಹೃದಯದಲ್ಲಿ ತಂದು ಏಕೀಕರಣಮಾಡಿ, ಶ್ರೀವಿಷ್ಣು ಸರ್ವೋತ್ತಮನಾರಂಭಿಸಿ ಕಳೆವಶ ಪಾಲಿಪ ಸಮಸ್ತ ದೇವತೆಗಳ ಅಂಶದಲ್ಲಿ ಪೊಗಿಸಿ, ಅಣು ತಾರತಮ್ಯವನ್ನರಿತು ಹರಿಯನ್ನು ಷೋಡಶೋಪಚಾರ ಪೂಜಾ ಮಾಡಿ ಸ್ಥೂಲದೇಹದಲಿಪ್ಪ ಪಾಪಕೃತ್ಯ ಪ್ರೇರಕರಾದ ಕಲಿ ಮೊದಲಾದ ದಾನವರ ತಾರತಮ್ಯವನ್ನು ತಿಳಿದು,

## ೩೦ನೆಯ ಸಂಧಿ

ಮನೋಮಯ ಬಹಿರಂಗ ಜಡಪದಾರ್ಥಗಳಲ್ಲಿ ಕಲ್ಲ್ಯಾದಿಗಳ ರಸ ಬೇರೆ ಇದೆ ಎಂದು ಭಾವಿಸಿ

## ೩೧ನೆಯ ಸಂಧಿ

ಶುದ್ಧ ಸತ್ವರಸ, ಪ್ರಾಕೃತರಸವು ತತ್ತ್ವೇಶರಾರಂಭಿಸಿ ವಾಯು ಬ್ರಹ್ಮ ಪರಿಯಂತ ಅಪ್ರಾಕೃತರಸ ಶ್ರೀ ಲಕ್ಷ್ಮೀನಾರಾಯಣನು ಸಕಲ ಸ್ವಾಖ್ಯ ಅಪ್ರಾಕೃತರಸವನ್ನು ಸ್ವೀಕರಿಸುವನೆಂದು ನೈವೇದ್ಯವಿಡಲು ನೈವೇದ್ಯ ಸಂಧಿಯನ್ನು ಪೇಳಿ, ತಾಂಬೂಲ ದಕ್ಷಿಣಾದಿಗಳನ್ನರ್ಪಿಸಿ

## ೩೨ನೆಯ ಸಂಧಿ

ಕಕ್ಷಾ ತಾರತಮ್ಯ ಶ್ರೀಹರಿಯಾರಂಭಿಸಿ ಮಾನುಷೋತ್ತಮರ ತಾರತಮ್ಯಾನುಸಾರ ನಮನಸ್ತೋತ್ರರೂಪ ಮಂಗಳಾರತಿಗಳನ್ನೆತ್ತಿ ಉಪಸಂಹಾರರೂಪದಿಂದ ಎಲ್ಲೆಲ್ಲಿಯೂ ತತ್ತ್ವನುವನು ಧರಿಸಿದ ದೇವಾಂಶಗಳನು ಅಲ್ಲಿಗಲ್ಲಿ ಚಿಂತಿಸಿ ಅವರವರ ನಿರ್ದೇಶವನು ತಿಳಿದು ಶ್ರೀಹರಿಯ ಪ್ರಾರ್ಥಿಸುತ್ತ ಆತ್ಮಾದಿ ಗುಣೋಪಾಸನೆ ಯನ್ನೆಸಗಿ

**ಜಯಜಯತು ತ್ರಿಜಗದ್ವಿಲಕ್ಷಣ । ಜಯಜಯತು ಜಗದೇಕಕಾರಣ ॥**
**ಜಯಜಯತು ಜಾನಕೀರಮಣ । ನಿರ್ಗತ ಜರಾಮರಣ ॥**
**ಜಯಜಯತು ಜಾಹ್ನವೀ ಜನಕ । ಜಯಜಯತು ದೈತ್ಯಕುಲಾಂತಕ ॥**
**ಭವಾಮಯಹರ ಜಗನ್ನಾಥವಿಠ್ಠಲ । ಪಾಹಿಮಾಂ ಸತತಂ ॥**

ಎಂದು ಮಂಗಳ ಮಾಡಿರುವರು.

ಈ ಹರಿಕಥಾಮೃತಸಾರವು ಅಗಾಧವು. ಸಕಲ ವೇದಶಾಸ್ತ್ರಾರ್ಥಪೂರಿತವಾದುದು. ಇದರ ಸಾರ ಸಂಗ್ರಹವನ್ನು ಬರೆಯಲು, ನನ್ನಂಥ ಪಾಮರನು ಶಕ್ತನಲ್ಲ. ಶ್ರೀ ಗುರು ವರದೇಂದ್ರ ಶ್ರೀ ರಾಘವೇಂದ್ರ ಗುರುರಾಜರಿಂದ ಚೋದಿತ ಪರಿಮಳಾಚಾರ್ಯ ಸಂಘವು ಈ ಮಂದನನ್ನು ಪ್ರೇರಿಸಿ ಆಜ್ಞಾಯಿತ್ತಂತೆ ಶ್ರೀಹರಿ ಗುರುಗಳು ಬರೆದು ಬರೆಸಿದಂತೆ ಬರೆದು, ಅಸ್ಮದ್ಗುರ್ವಂತರ್ಯಾಮಿ ಜಗದ್ಗುರು ಶ್ರೀಮತ್ಸುಯಮೀಂದ್ರತೀರ್ಥ ಶ್ರೀಪಾದಂಗಳವರ ಅಂತಸ್ಥ ಶ್ರೀಮೂಲ ಮಂತ್ರಾಲಯ ಪ್ರಭುಗಳವರಲ್ಲಿ ಸದಾ ಸನ್ನಿಹಿತರಾದ ಶ್ರೀ ಭಾರತೀ ರಮಣ ಮುಖ್ಯ ಪ್ರಾಣಾಂತರ್ಯಾಮಿ, ರಾಮ, ನೃಹರಿ, ಶ್ರೀಕೃಷ್ಣ ವೇದವ್ಯಾಸರೂಪೀ ಭಗವಂತನ ಅಡಿದಾವರೆ ಗಳಲ್ಲಿ ಶ್ರೀಕೃಷ್ಣಾರ್ಪಣಪೂರ್ವಕವಾಗಿ ಶ್ರೀ ಹರಿಕಥಾಮೃತ ಸಾರಸಂಗ್ರಹವನ್ನು ಅರ್ಪಿಸುವೆನು. ತಪ್ಪು ಗಳನು ಸಜ್ಜನರು ತಿದ್ದುವುದು.

॥ ಶ್ರೀಃ ॥

# ಶ್ರೀಮದ್ವಾಯುತತ್ವ ವಿಚಾರವು

ಲೇಖಕ:—ಮ॥ ರಾ॥ ಸಂ॥ ಶ್ರೀ ಚಿಕ್ಕೇರೂರು ಗೋವಿಂದಾಚಾರ್ಯಃ, ಹರಪನಹಳ್ಳಿ.

---

ಸಕಲ ಕಲಿಕಲ್ಮಷಘ್ನನಾದ ಶ್ರೀಮನ್ನಾರಾಯಣನ ಅತ್ಯರ್ಥಪ್ರಸಾದವೇ ಸರ್ವಾಪೇಕ್ಷಿತ ಮೋಕ್ಷವನ್ನು ಕುರಿತು ಕಾರಣವೆಂಬುದು ಸಚ್ಛಾಸ್ತ್ರಸಮ್ಮತಪ್ರಮೇಯವು. "ಏನಂ ಮೋಚಯಾಮಿ" ಎಂಬ ಭಗವತ್ಪ್ರಸಾದವಾಗಬೇಕಾದರೆ ಶ್ರೀ ಭಾರತೀರಮಣ ಮುಖ್ಯಪ್ರಾಣದೇವರ ಪರಮಾನುಗ್ರಹವು ಅತ್ಯವಶ್ಯಕವಾದುದು. ಯಾರನ್ನು ಶ್ರೀಮದ್ವಾಯುದೇವರು ಭಕ್ತತ್ವೇನ ಸ್ವೀಕರಿಸುವರೋ ಅವರನ್ನೇ ಶ್ರೀಹರಿಯು ಸ್ವೀಕರಿಸುತ್ತಾನೆ. ಆ ಮಾರುತಿಯು ಯಾರನ್ನು ತ್ಯಜಿಸುವನೋ ಅವರನ್ನು ಶ್ರೀ ನಾರಾಯಣನು ಭಕ್ತತ್ವೇನ ಗ್ರಹಿಸುವುದಿಲ್ಲ.

**ಯನ್ನರಂ ಮಧ್ವರಾಜಸ್ತು ನ ಗೃಹ್ಣಾತಿ ಹರಿಪ್ರಿಯಃ ।**
**ತಂ ನರಂ ನೃಹರಿಃ ಸಾಕ್ಷಾತ್ ನ ಚ ಗೃಹ್ಣಾತಿ ವಾಲಿವತ್ ॥ ೧ ॥**
**ಯಂ ನರಂ ಮಧ್ವರಾಜಸ್ತು ಸ್ವೀಕರೋತಿ ಯದಾಗುರುಃ ।**
**ಸುಗ್ರೀವಮಿವ ತಂ ಶ್ರೀಶಃ ಸ್ವೀಕರೋತಿ ನ ಸಂಶಯಃ ॥ ೨ ॥**

[ಮಧ್ವಾಮೃತ ಮಹಾರ್ಣವ]

ಇಂತಹ ಪ್ರಸಾದಪಾತ್ರತೆಯು ನಮ್ಮಲ್ಲಿ ಬರಬೇಕಾದರೆ ತದ್ವಿಷಯಕ ಭಕ್ತಿಯು ನಮ್ಮಲ್ಲಿ ಇರಲೇಬೇಕು. ಭಕ್ತಿ ಎಂದರೆ ಮಾಹಾತ್ಮ್ಯ ಜ್ಞಾನಪೂರ್ವಕ ಸುದೃಢಸ್ನೇಹವು. ಗುರುಭಕ್ತಿ ಜನ್ಯ ಮುಕುಂದ ಭಕ್ತಿಯು ತಾರಕವಾದುದು ಎಂದಮೇಲೆ ಗುರುವರ್ಯರಾದ ಶ್ರೀಮದ್ಭಾರತೀಪತಿ ಮುಖ್ಯಪ್ರಾಣದೇವರ ಮಾಹಾತ್ಮೆಯನ್ನು ತಿಳಿಯುವುದು ನ್ಯಾಯಪ್ರಾಪ್ತವಾದುದು.

ಏತನ್ಮಧ್ಯೇ "ಪ್ರಾಣ"—"ವಾಯು"—"ಮರುತ್"—ಮುಂತಾದ ಶಬ್ದಗಳು ವಿಪುಲವಾಗಿ ಶ್ರುತವಾಗಿರುವವು. ಪ್ರಾಣ-ವಾಯ್ವಾದಿ ಶಬ್ದಗಳಿಂದ ಬೋಧ್ಯರಾದ ಇತರ ಜೀವರಿಗೂ, ಜೀವೋತ್ತಮರಾದ ವಾಯುದೇವರಿಗೂ ಏನು ವೈಲಕ್ಷಣ್ಯವಿದೆ ? ಎಂದು ನಾವು ತಿಳಿಯುವದು ಅವಶ್ಯಕವಾಗಿದೆ. ಆದುದರಿಂದ :—

(೧) ಸೂತ್ರನಾಮಕ ವಾಯುದೇವರೆಂದರೆ ಯಾರು ?
(೨) ಅಹಂಕಾರಿಕ ಪ್ರಾಣನೆಂದರೆ ಯಾರು ?
(೩) ಪ್ರವಹವಾಯುವೆಂದರೇನು ?
(೪) ಪ್ರಾಣಾ—ಪಾನ—ವ್ಯಾನ—ಉದಾನ—ಸಮಾನ ವಾಯುಗಳು ಯಾರು ?
(೫) ದಿಗಭಿಮಾನಿ ವಾಯುವಾರು ?
(೬) ಭೂತವಾಯುವೆಂದರೇನು ?
(೭) ಮರುತ್ತುಗಳೆಂದರೆ ಯಾರು ?

ಇವೇ ಮೊದಲಾದ ವಿಷಯವನ್ನು ವಿಮರ್ಶೆಮಾಡಿ ತಿಳಿದುಕೊಳ್ಳುವುದು ಸಮೀಚೀನ ಜ್ಞಾನಂ ಪ್ರತಿ ಕಾರಣವೆಂದರಿತು ಸಂಕ್ಷೇಪವಾಗಿ ಒಂದೊಂದು ವಿಷಯವನ್ನು ನಿರೂಪಣೆ ಮಾಡಲಾಗುವುದು.

# (೧) ಸೂತ್ರನಾಮಕ ವಾಯುದೇವರು

ಇವರೇ ನಮ್ಮ ಭಾರತೀಪತಿ ಮುಖ್ಯಪ್ರಾಣದೇವರು. ಸಂಕರ್ಷಣನಾಮಕ ಪರಮಾತ್ಮನಿಂದ ಜಯಾ ನಾಮಕ ಲಕ್ಷ್ಮೀದೇವಿಯರಿಂದ ಉತ್ಪನ್ನರಾದವರು. ಇವರು ಸರ್ವಜೀವರ ಲಿಂಗಶರೀರದಲ್ಲಿದ್ದು ಅದನ್ನು ಧಾರಣಮಾಡಿರುವುದರಿಂದಲೇ ಆ ಶರೀರವು ಕಾರ್ಯಕಾರಿಯಾಗಿದೆ. ಈ ವಾಯುದೇವರು ಅನಾದ್ಯಪರೋಕ್ಷಿಗಳಾದ ಅನಂತಸಂಖ್ಯಾತರಾದ ಋಜುಗಣದರಸು. ವಾಯುಪದಕ್ಕೆ ಬರುವ ಒಬ್ಬೊಬ್ಬ ಋಜುವೂ ೧೦೦ ಕಲ್ಪಗಳು ಸಾಧನಮಾಡಿ "ವಾತವ್ಯ" ಪದವಿಯನ್ನು ಸಂಪಾದಿಸಿರುತ್ತಾರೆ. ಅನಂತರ ೯೮ ಕಲ್ಪಗಳು ಸಾಧನೆ ಮಾಡಿ ವಾಯುದೇವರ ಪದವಿಗೆ ಬರುತ್ತಾರೆ. ವಾಯುಪದದಿಂದ ೧ ಕಲ್ಪ ಭಗವದ್ಭಕ್ತರ ವಿಧ್ವಂಸನೆ ಮಾಡುವುದರಿಂದಲೂ, ಸರ್ವ ಚೇತನರಲ್ಲಿಯೂ ಅಂತರ್ನಿಯಾಮಕರಾಗಿದ್ದು ಶ್ವಾಸ ಜಪ ಮಾಡುವುದರಿಂದಲೂ, ಅನೇಕ ರಾಜಸೂಯಾಧ್ವರಗಳನ್ನು ಮಾಡಿ ಶ್ರೀಹರಿಗೆ ಅರ್ಪಿಸುವುದರಿಂದಲೂ ವಿಚಿತ್ರಸಾಧನೆಮಾಡಿ ಸಿದ್ಧರಾಗುತ್ತಾರೆ.

ಈ ಮೂರು ತನು, ಶುಕ್ಲ, ಶೋಣಿತ, ಸಂಪರ್ಕರಹಿತನೆಂದು ವ್ಯಕ್ತವಾಗಿದೆ. ಮೂಲರೂಪವೊಂದು, ಅವತಾರಗಳು ಮೂರು. ಅಂತೂ ನಾಲ್ಕು ರೂಪಗಳಲ್ಲಿಯೂ ಈ ದೋಷವಿಲ್ಲ.

**...............................ವಾಯುರೂಪ ಚತುಷ್ಟಯೇ ।**
**ಶುಕ್ಲಶೋಣಿತ ಸಂಬಂಧೋಹ್ಯವತಾರ ಚತುಷ್ಟಯೇ ।**
**ನಾಸ್ತಿನಾಸ್ತ್ಯೇವ ಪಕ್ಷೀಂದ್ರ ಯತೋ ನಾಸ್ತ್ಯ ಶುಭಂ ತತಃ ॥**

[ಮ॥ ಪು॥ ಬ್ರಹ್ಮಕಾಂಡ]

## ಇವರೇ ಜಗದ್ಗುರುಗಳು

ಯಾರು ಮೂವತ್ತೆರಡು ಲಕ್ಷಣಗಳಿಂದ ಯುಕ್ತರಾಗಿರುವರೋ ಅವರೇ ಜಗದ್ಗುರುಗಳಾಗಲು ಯೋಗ್ಯರು. ಮಹಾಸಂಹಿತಾಖ್ಯ ಗ್ರಂಥದಲ್ಲಿ :—

**ದ್ವಾತ್ರಿಂಶಲ್ಲಕ್ಷಣೈ ಸ್ಸಮ್ಯಗ್ಯುಕ್ತಾ ವಾಯುತ್ವ ಯೋಗ್ಯಕಾಃ ।**
**ಅಷ್ಟಾವಿಂಶಲ್ಲಕ್ಷಣಾಶ್ಚ ಗಿರೀಶ ಪದಯೋಗಿನಃ ॥**

ಎಂದು ಹೇಳಲಾಗಿದೆ.

**ವಿಷ್ಣು ರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ ॥**

ಎಂಬ ಪ್ರಮಾಣಾನುಗುಣವಾಗಿ ಮುಕ್ತಿಪ್ರದರಾದವರೇ ನಮ್ಮಗಳಿಂದ ಉಪಾಸ್ಯರಾದ ಪ್ರಾಣದೇವರು. ಇವರೇ ಪ್ರಳಯ ಕಾಲದಲ್ಲಿಯೂ ಸಹ ಪ್ರತಿಭಾತಪರಾವರರೂ, ಆನಂದಮಾತ್ರ ಶರೀರಯುಕ್ತರೂ ಆಗಿರುತ್ತಾರೆಂದು ಶ್ರೀ ಮಂತ್ರಾಲಯ ಪ್ರಭುಗಳು ಪ್ರಾತಃಸಂಕಲ್ಪ ಗದ್ಯದಲ್ಲಿ ಹೇಳಿದ್ದಾರೆ.

ವ್ಯಾಪ್ತದರ್ಶಿಗಳಾದ ಕರ್ಮಜದೇವತೆಗಳಿಂದ ಮೊದಲುಮಾಡಿ ಹದಿನಾರು ಕಕ್ಷಾದಲ್ಲಿ ಇರುವ ಸರಸ್ವತೀ ಭಾರತೀ ದೇವಿಯರಿಗಿಂತಲೂ ಅತ್ಯುತ್ತಮರು. ಇವರೆಲ್ಲರೂ ಅನಾದ್ಯಪರೋಕ್ಷಿಗಳು, ವ್ಯಾಪ್ತದರ್ಶಿಗಳು, ಭಕ್ತಿಯೋಗಿಗಳು. ಇವರೆಲ್ಲರಿಗಿಂತಲೂ ಬ್ರಹ್ಮವಾಯುಗಳು ಅತ್ಯುತ್ತಮರೆಂದು ಪ್ರಮೇಯ ಮುಕ್ತಾವಳಿಯಲ್ಲಿ ಹೇಳಲಾಗಿದೆ. ಇವರು ಸರ್ವಜೀವರ ಸ್ವರೂಪ ದೇಹದಲ್ಲಿಯೂ ಹೊಕ್ಕು ದೇಹೇಂದ್ರಿಯ ಪ್ರೇರಕರಾಗಿರುವರು. ಆದುದರಿಂದಲೇ ಇವರಿಗೆ "ಮಾತರಿಶ್ವಾ" ಎಂಬ ನಾಮವು ಪ್ರಾಪ್ತವಾಯಿತು.

ಎಂದು ಶಾಂಡಿಲ್ಯ ತತ್ತ್ವದಲ್ಲಿ "ವಾಯುರ್ಹಿ ಪ್ರತಿಮಾ ಹರೇಃ" ಎಂದು ಸತ್ತತ್ತ್ವ ರತ್ನಮಾಲಾದಲ್ಲಿಯೂ, ವಾಯುದೇವರೇ ಭಗವಂತಗೆ ಮುಖ್ಯಾಧಿಷ್ಠಾನರು ಎಂದು ಉಕ್ತವಾಗಿರುವುದರಿಂದಲೂ

(೨) ಆಭಣಾತ್ಮಸಮತ್ವೇನ ಸರ್ವಥಾ ಆಸುರಾವೇಶವಿಲ್ಲದದರಿಂದಲೂ

(೩) ಅವತಾರತ್ರಯೇಷ್ವಪಿ ಅರಿಭಿರ್ಹಿಂಸನೇಪಿ ಅತಿರೋಹಿತ ವಿಜ್ಞಾನತ್ವ ಇರೋಣದರಿಂದಲೂ

(೪) ತೈತ್ತರೀಯಾದ್ಯುಪನಿಷತ್ತುಗಳಲ್ಲಿ, ವಾಯುಪುರಾಣದಲ್ಲಿಯೂ ದೇವತಾ ಸಂವಾದರೂಪೇಣ ಸಂಸ್ಥಾಪಿತ ಸಕಲ ಶರೀರಾಧಾರಕತ್ವ ಇಂದ್ರಿಯಮಾನಿಪ್ರೇರಕತ್ವವಿರುವದರಿಂದಲೂ

(೫) ಜಗಜ್ಜೀವನಕರತ್ವ ಮತ್ತು ಇತರ ಜೀವಾಸಾಧ್ಯವಾದ ಸರ್ವಜೀವ ಸ್ವರೂಪಾಂತಸ್ಥತ್ವ ವಿರುವುದರಿಂದಲೂ

(೬) ಪ್ರಳಯಕಾಲೇಪಿ ಪ್ರತಿಭಾತ ಪರಾವರತ್ವ ಭಾವರೂಪಾಜ್ಞಾನ ವಿಧುರತ್ವರೂಪ ಮೃತ್ಯು ರಾಹಿತ್ಯವಿರೋಣದರಿಂದಲೂ

(೭) ಶ್ರೀರಮಾ ನಾರಾಯಣಾನಂತರ ಸರ್ವವೇದ ಪ್ರತಿಪಾದ್ಯತ್ವವಿರುವುದರಿಂದಲೂ

(೮) ಅನನ್ಯಜೀವ ಸಾಧ್ಯವಾದ ಮೋಕ್ಷದಾತೃತ್ವ ಶಕ್ತಿ ಇರುವುದರಿಂದಲೂ

(೯) ಸರ್ವಾಂಗ ಸಾಯುಜ್ಯಯೋಗ್ಯತ್ವ, ಮತ್ತು ಏಕಾಂತ ಭಕ್ತಾಗ್ರೇಸರತ್ವ ಇರೋಣದರಿಂದಲೂ

(೧೦) ದ್ವಾತ್ರಿಂಶಲ್ಲಕ್ಷಣಲಕ್ಷಿತತ್ವ, ಶುಕ್ಲ ಶೋಣಿತರಾಹಿತ್ಯ, ಜಗಜ್ಜೀವನಕರತ್ವವಿರುವುದರಿಂದಲೂ

(೧೧) ಛಾಂದೋಗ್ಯ—ಪಂಚಮ, ಬೃಹದಾರಣ್ಯಕ ತೃತೀಯದಲ್ಲಿ ಉಕ್ತವಾದಂತೆ, ಜ್ಯೇಷ್ಠತ್ವ-ಶ್ರೇಷ್ಠತ್ವ-ಸರ್ವದೈತ್ಯ ವಿಧ್ವಂಸನಕರತ್ವ, ಪರಶುಕ್ಲತ್ರಯಾಂತರ್ಗತತ್ವಾದ್ಯಖಿಲ ಮಂಗಳಕರ ಗುಣಗಣಬೃಂಹಿತರಾದ ಶ್ರೀಮುಖ್ಯಪ್ರಾಣಾಭಿನ್ನರಾದ ಶ್ರೀಮಧ್ವಾಚಾರ್ಯರೇ ಮುಮುಕ್ಷೂಪಾಸ್ಯರೆಂದು ಶಾಸ್ತ್ರಸಿದ್ಧ ಪ್ರಮೇಯವಾಗಿದೆ.

**ಜ್ಞಾನೇ ವಿರಾಗೇ ಹರಿಭಕ್ತಿಭಾವೇ ಧೃತಿ ಸ್ಥಿತಿ ಪ್ರಾಣ ಬಲೇಷು ಯೋಗೇ ।**
**ಬುದ್ಧೌ ಚ ನಾನ್ಯೋ ಹನುಮತ್ಸಮಾನಃ ಪುಮಾನ್ಕದಾಚಿತ್ಕ್ವಚಕಶ್ಚನೈವ ॥**

**ವಾಯುರ್ಭೀಮೋ ಭೀಮನಾದೋ ಮಹೋಜಾಃ ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ ।**
**ಅನಾವೃತ್ತಿ ರ್ದೇಹಿನಾಂ ದೇಹಪಾತೇ ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ ॥**



# ಕಲಿಯುಗ ಕಲ್ಪತರು

## (ಶ್ರೀ ಮಂತ್ರಾಲಯ ಪ್ರಭುವರ್ಯರ ರಥೋತ್ಸವ ವೈಭವ)

ಲೇಖಕ:—ಹರಿಪುರಿ ರಾಯಸಂ ತಿರುಮಲರಾವ್, ಬಿ.ಎ., ಕಮರ್ಷಿಯಲ್ ಟ್ಯಾಕ್ಸ್ ಆಫೀಸರ್, ಹರಪನಹಳ್ಳಿ.

---

**ಪ್ರವೇಶ:**—ಅಮರಾವತಿಯಲ್ಲಿ ಇಂದ್ರದೇವರು ವಜ್ರಾಯುಧಪಾಣಿಯಾಗಿ ಶಚೀದೇವಿಯರೊಡನೆ ಒಡ್ಡೋಲಗದಲ್ಲಿರುವಾಗ್ಗೆ ದೇವಲೋಕದ ವೈಭವಗಳೆಲ್ಲವೂ ಭೂಲೋಕವನ್ನು ಕುರಿತು ಸಾರ್ದುದಂ ಕಂಡು ಶಚೀದೇವಿಯರು ಆಶ್ಚರ್ಯಚಕಿತರಾಗಿ)

**ಶಚೀ:**—ನಾಥಾ, ಇದೇನಾಶ್ಚರ್ಯವು! ಸುರಲೋಕಕ್ಕೆ ಬರುವ ವೈಭವಗಳೆಲ್ಲವೂ ಭೂಸುರಲೋಕವನ್ನು ಕುರಿತು ಪಯಣಮಾಡುವುವು. ವಿಮಾನಗಳು ಸುತ್ತಿ ಸುತ್ತಿ ಭೂಲೋಕಕ್ಕೆ ಅವರೋಹಣ ಮಾಡುವುವು! ಏನು ವಿಪರೀತ ಕಾಲವಿದು?

**ದೇವೇಂದ್ರ:**—ಅಹುದು; ನಿಜವಾಗಿಯೂ ವಿಪರ್ರೀತಕಾಲವೇ. ಕಾರಣವೇನಿರಬಹುದು? ಅಗೋ ನಾರದರು ಇಲ್ಲಿಗೆ ಬರುತ್ತಿರುವರು. ಅವರಿಗೆ ತಿಳಿಯದ ವಿಷಯವಾವುದೂ ಇರಲಾರದು; ವಿಚಾರಿಸುವ!

**[ನಾರದರ ಆಗಮನ]**

ನಾರಾಯಣ ಹರಿನಾರಾಯಣ ಹರಿ ।
ನಾರಾಯಣನನು ನೆನೆ ಮನವೇ ॥

(ಸಭೆಯಲ್ಲಿ ಎಲ್ಲರೂ ಎದ್ದು ಅವರಿಗೆ ಉಚಿತಾಸನವನ್ನು ಕೊಟ್ಟು ಸನ್ಮಾನಿಸುವರು)

**ದೇವೇಂದ್ರ:**—ನಾರದರೇ! ಸಾಧಾರಣವಾಗಿ ಭೂಲೋಕದಿಂದ ಸುರಲೋಕಕ್ಕೆ ವಿಮಾನಗಳೇರಿ ನರಸುರಾದಿಗಳು ಬರುವುದುಂಟು. ಕಾಲವೈಪರೀತ್ಯದಿಂದ ಜಗತ್ತು ವ್ಯುತ್ಕ್ರಮವಾಗಿ ನಡೆಯುತ್ತಲಿರುವುದು. ಏನಾಶ್ಚರ್ಯವಿದು? ಸುರಲೋಕಕ್ಕೆ ಬರುವ ವೈಭವಗಳೆಲ್ಲ ಭೂಸುರಲೋಕವನ್ನು ಕುರಿತು ಪಯಣಮಾಡುವುವು! ಅಗೋ ನೋಡಿರಿ—ವಿಮಾನಾವಳಿಗಳು ಭರತಖಂಡದ ವಿಂಧ್ಯಪರ್ವತದ ದಕ್ಷಿಣದಿಕ್ಕನ್ನು ಕುರಿತು ಯಾವರೀತಿ ಸಂಚಾರ ಮಾಡುತ್ತವೆ!

**ನಾರದರು:**—ಹೇ ಸುರವರ್ಯ! ಇದರಲ್ಲಿ ಆಶ್ಚರ್ಯವೇನಿದೆ? ಯಾವ ವ್ಯಕ್ತಿಯನ್ನುದ್ಧರಿಸುವುದಕ್ಕೆ ಆ ಅವ್ಯಕ್ತನಾದ ಪರಮಾತ್ಮನು ಸ್ತಂಭದಲ್ಲಿ ವ್ಯಕ್ತನಾದನೋ, ಆ ವ್ಯಕ್ತಿಯೇ ಶ್ರೀ ರಾಘವೇಂದ್ರ ಯತಿವರ್ಯನಾಗಿ ಸಂತತ ಶ್ರೀ ನಾರಾಯಣ ಪಾದಪದ್ಮಯುಗಳ ಚಿಂತಾಮೃತಾಸ್ವಾದ ಮತ್ತು ಮಧುಕರನಾಗಿ "ಶ್ರೀ ಮಧ್ವಮತೋದ್ಧಾರಕ"ನೆಂದು ಜಗದ್ವಿಖ್ಯಾತನಾಗಿ "ಜಗದ್ಗುರು"ವೆನಿಸಿ ಮಂತ್ರಾಲಯ ಕ್ಷೇತ್ರದಲ್ಲಿ ಬೃಂದಾವನಸ್ಥನಾಗಿ ಭಕ್ತಬೃಂದಕ್ಕೆ ಕಾಮಿತಾರ್ಥಗಳನ್ನು ಬೀರುವ "ಕಲಿಯುಗ ಕಲ್ಪತರು"ವೆಂತ ಪ್ರಸಿದ್ಧಿ ಹೊಂದಿ ರಥಾರೂಢನಾಗಿ ಮೆರೆಯುತ್ತಿರುವ ಆ ಪ್ರಹ್ಲಾದಾಂಶ ಸಂಭೂತರಾದ ಶ್ರೀ ರಾಯರ ರಥೋತ್ಸವದ ವೈಭವವನ್ನು ನೋಡಲು ತ್ರಿಮೂರ್ತಿಗಳು, ದಿಕ್ಪಾಲಕರು, ನವಗ್ರಹದೇವತೆಗಳು, ಋಷಿಗಳು, ದೇವ

ಗಂಧರ್ವಾದಿ ಯಾವತ್ತರೂ ವಿಮಾನಾರೂಢರಾಗಿ ಅತಿ ಸಂಭ್ರಮದಿಂದ ತೆರಳುತ್ತಿರುವರು. ಸಾಕ್ಷಾತ್ ಶ್ರೀಹರಿಯೇ ವೈಕುಂಠಪುರದಿಂದ ಭೈಸ್ಮ್ಮೀ ಸತ್ಯಾ ಸಹಿತ ಗರುಡಾರೂಢನಾಗಿಯೂ, ಬ್ರಹ್ಮ ಸರಸ್ವತಿಯರು ಹಂಸಾರೂಢರಾಗಿಯೂ ತೆರಳಿರುತ್ತಾರೆ. ಸರ್ವ ದೇವತೆಗಳೂ ಇವರನ್ನು ಹಿಂಭಾಲಿಸಿರುವರು. ಸುರೋತ್ತಮನಾದ ನೀನು ಸಹಾ ಶಚೀಸಹಿತ ದಿಗ್ವಿಜಯ ಮಾಡಿರಬಹುದೆಂದು ನಿಶ್ಚಯವಾಗಿ ಅರಿತಿದ್ದೆವು. ಆಕಸ್ಮಿಕವಾಗಿ ಬಂದು ನೋಡಲು ನೀವುಗಳು ಇನ್ನೂ ಸಭೆಯಲ್ಲೇ ಇರುವಿರಿ! ಸಾಕ್ಷಾತ್ ಶ್ರೀಹರಿಯೇ ತೆರಳಿರುವುದರಿಂದ ನಾನು ಕಾಲವಿಳಂಬಮಾಡಲು ಸಾಧ್ಯವಿಲ್ಲ. (ಹೊರಡಲನುವಾಗುವರು.)

**ಶಚೀದೇವಿ:**—(ಅವರನ್ನು ತಡೆದು ಈರ್ಷೆಯಿಂದ) ಏನು, ದೇವರ್ಷಿಗಳೇ! ತಾವು ತ್ರಿಲೋಕ ಸಂಚಾರಿಗಳು ಮತ್ತು ತ್ರಿಕಾಲ ಜ್ಞಾನಿಗಳು. ಹೀಗಿದ್ದು, ಜರಾಮರಣ ಗ್ರಸ್ತರಾದ ಮತ್ತು ಆಧಿ ವ್ಯಾಧಿಗಳಿಂದ ಪೀಡಿತರಾದ ನರಹುಳುಗಳನ್ನೂ ನರಲೋಕವನ್ನೂ ಈರೀತಿ ಮೂರುಲೋಕದ ಒಡೆಯನಾದ ದೇವೇಂದ್ರನ ಸಭೆಯಲ್ಲಿ ಮಿತಿಮೀರಿ ಸ್ತೋತ್ರ ಮಾಡುವಿರಿ! ನರಸ್ತುತಿ ನಿಂದ್ಯವಲ್ಲವೇ ?

ವಿದ್ರುಮ ಸೋಪಾನಗಳಿಂದಲೂ, ಮರಕತಮಣಿಮಯ ಪ್ರದೇಶಗಳಿಂದಲೂ ಚಂದ್ರಿಕಾ ಸನ್ನಿಭ ಸ್ಫಟಿಕಸಂಘಟಿತ ಕುಡ್ಯಗಳಿಂದಲೂ, ಪದ್ಮರಾಗ ಪೀಠ ಕನಕ ಕವಾಟ ಗೇಹಳೀ ವಿಟಂಕವಾತಾಯನಂಗಳಿಂದಲೂ, ವಿಲಂಬಮಾನ ಮುಕ್ತಾಫಲ ಧಾಮ ವಿತಾನ ಶೋಭಿತ ಧವಳ ಪರ್ಯಂಕಗಳಿಂದಲೂ, ವಿವಿಧವಿಚಿತ್ರ ವಿಮಾನಗಳಿಂದಲೂ, ನಿರಂತರ ಸುರಭಿ ಕುಸುಮ ಫಲಭರಿತ ಪಾದಪ ಮಂಡಿತ ಮಹೋದ್ಯಾನಗಳಿಂದಲೂ, ಹೇಮಾರವಿಂದ ಸೌಗಂಧಿಕ ಬಂಧುರ ಸರೋವರಗಳಿಂದಲೂ, ರಮಣೀಯ ರತ್ನ ಪ್ರಾಸಾದ ವಿಶೇಷಂಗಳಿಂದಲೂ, ಮನೋಹರ ಪರಿಮಳ ಶೀತಲ ಮಂದಮಾರುತಗಳಿಂದಲೂ, ಮೃದುಮಧುರ ನಿನದ ಕೀರ ಕೋಕಿಲ ಕುಲ ಕೋಲಾಹಲಗಳಿಂದಲೂ, ಕಾಮಧೇನು, ಕಲ್ಪವೃಕ್ಷ ಚಿಂತಾಮಣಿ ಪ್ರಮುಖ ಸಕಲ ಸೌಭಾಗ್ಯಗಳಿಂದ ಶೋಭಿಸುತ್ತಿರುವ ಮಹೇಂದ್ರ ಭವನವೆಲ್ಲಿ?

ಮತ್ತು

ಮಾತೃಗರ್ಭದಲ್ಲಿ ಘನಕ್ರಿಮಿ ವಿಣ್ಮೂತ್ರ ರಕ್ತ ಗರ್ತದಲ್ಲಿ ಮುಳುಗುತ್ತ ಜಠರಾಗ್ನಿಯಿಂದ ದಿನದಿನ ತಪ್ಯಮಾನ ದೇಹವುಳ್ಳವನಾಗಿಯೂ, ದಶಮಮಾಸದಲ್ಲಿ ಅಧೋಮುಖನಾಗಿ ಉಚ್ಛ್ವಾಸನಿಶ್ವಾಸಗಳಿಲ್ಲದೇ ಘನದುಃಖಭಾಜನನಾಗಿಯೂ, ವಿಗತಜ್ಞಾನಿಯಾಗಿಯೂ, ರಕ್ತಾದಿ(ಸಿಕ್ತ)ಗ್ಧಾಂಗನಾಗಿಯೂ, ನೆಲದಮೇಲೆ ಬಿದ್ದು ಅಳುತ್ತಾ, ಜ್ಞಾನಹೀನನಾಗಿ ಜಡದಂತೆ ಇದ್ದು ತದನಂತರ ನಿಜಭಾವಾನಭಿಜ್ಞರಾದ ಇತರರಿಂದ ವೃದ್ಧಿ ಹೊಂದುತ್ತಾ, ಅಭಿಮತಾರ್ಥಗಳನ್ನು ಹೇಳಲರಿಯದೇ ಅನೇಕ ಕೀಟಸಂಕುಲಪರ್ಯಂಕದಲ್ಲಿ ಶಯನಿಸಿ ಆಸನ ಉತ್ಥಾನ ಗಮನಗಳಲ್ಲಿ ಅಶಕ್ತನಾಗಿ ತನ್ನ ಶರೀರ ಚರ್ಮವನ್ನು ಹರಿದು ತಿನ್ನುವ ಮಶಕ ಮತ್ಕುಣ ಮಷಿಕಾದಿಗಳಿಂದ ವ್ಯಥೆಯನ್ನು ಹೊಂದುತ್ತಾ, ರೋದನ ಮಾಡುತ್ತಾ ಶೈಶವ (ಕೌಮಾ) ಪೌಗಂಡ ವಯೋನುರೂಪಾನಂತ ದುಃಖಗಳನ್ನನುಭವಿಸಿ, ಯೌವನದಲ್ಲಿ ಅಭಿಮತಾರ್ಥಸಿದ್ಧಿಯನ್ನು ಪಡೆಯಲು ವೃಥಾ ಆಗ್ರಹ ಮಾಡುತ್ತಾ ಕಾಮುಕರಾಗಿ ಕಾಮಿನೀ ಕಾಂಚಾಣಮಾತ್ರ ಪರಾಯಣರಾದ ನರಹುಳುಗಳೆಲ್ಲಿ? ಇವರಿಗೆ ನಿವಾಸಸ್ಥಾನವಾದ ನರಕಸದೃಶವಾದ ನರಲೋಕವೆಲ್ಲಿ? ನರಸ್ತುತಿಯಿಂದೊಡಗೂಡಿದ ನಿಮ್ಮ ಭೂಸುರಲೋಕದ ಕೀರ್ತಿಯ ಸ್ತೋತ್ರದ ಪಾಠವನ್ನು ನಿಲ್ಲಿಸಿರಿ.

**ನಾರದರು:**—(ನಕ್ಕು) ತಾಯಿ! ನಿಮ್ಮ ಸುರಲೋಕದ ವೈಭವದ ಹೆಮ್ಮೆ ಮತ್ತು ಸುಖಸಾಧನ ಪರಾಕ್ರಮ ಕೀರ್ತನದ ಹೆಮ್ಮೆಯು ಬಹಳವಾಗಿರುವಂತೆ ತೋರುವುದು.

"ಸುರಸದನಾಲಯದಂತೆ ಇರುವುದು ಮಂತ್ರಾಲಯ" ವೆಂದು ಜ್ಞಾನಿಗಳು ವರ್ಣಿಸಿರುವುದು ನಿಮ್ಮ ಕಿವಿಗಳಿಗೆ ಬಿದ್ದಿಲ್ಲವೋ ?

"ಸುರಪನಾಲಯುವಂ ಮೀರಿರುವುದು ಮಂತ್ರಾಲಯ" ಎಂದು ಪಾಠಾಂತರವಿರುವುದು. ಇದು ನಿಮಗೆ ಗೊತ್ತಿಲ್ಲವೋ ?

**ಶಚೀಂದ್ರರು :**—(ಆಶ್ಚರ್ಯದಿಂದ) ಸ್ವಾಮಿ ! ಅದು ಹೇಗೆ ?

**ನಾರದರು :—(1)** ಹಿಂದೆ ನರನಿಂದ ಪರಾಜಯಹೊಂದಿ ಐರಾವತವನ್ನು ಭೂಲೋಕಕ್ಕೆ ಕಳುಹಿಸಿ ಕೊಟ್ಟ ಕಥೆಯನ್ನು ಮರೆತುಬಿಟ್ಟಿರಾ ? ಅದೇಕೆ ? ನರನೆಂದೊಡನೆ ಇಷ್ಟು ಜಿಗುಪ್ಸೆ ? ನೀನೇ ಪೂರ್ವದಲ್ಲಿ ನರನಾದದ್ದು ಮರೆತೆಯಾ ? ಮತ್ತು ದೇವಸ್ವಭಾವರಾದ ಶ್ರೀರಾಘವೇಂದ್ರರನ್ನು ನರರೆಂದು ಭಾವಿಸುವರೇ ? ನೋಡಿ, ನಿಮ್ಮ ಉಪಾಸ್ಯ ಮೂರ್ತಿಯು ಒಬ್ಬ "ಉಪೇಂದ್ರ"ನಾದರೆ ಭೂಸುರೋತ್ತಮರಾದ ಶ್ರೀರಾಘವೇಂದ್ರರ ಉಪಾಸ್ಯ ಮೂರ್ತಿಗಳು ನಾಲ್ಕು ಇರುವುವು—

(ಕ) ಪ್ರಹ್ಲಾದವರದ—"ನರಮೃಗೇಂದ್ರ" (ನೃಸಿಂಹ)
(ಖ) ಇನವಂಶೋದ್ಭವ—"ರಾಘವೇಂದ್ರ" (ರಾಮ)
(ಗ) ಚಂದ್ರವಂಶೋದ್ಭವ—"ಯಾದವೇಂದ್ರ" (ಕೃಷ್ಣ)
(ಘ) ಪರಾಶರಾತ್ಮಜ—"ಮುನೀಂದ್ರ" (ವೇದವ್ಯಾಸ)

**(2) ಸುಧೆ—**

(ಚ) ಸುರಲೋಕದ ಸುಧೆ ಪರಿಮಳ ರಹಿತವಾದದ್ದು. ಭೂಸುರ "ಸುಧೆ" "ಪರಿಮಳೋ"ಪೇತವಾಗಿ ಜಗದ್ವಿಖ್ಯಾತವಾಗಿದೆ.

(ಛ) ಸುರಲೋಕದ ಸುಧೆ ಪುರಪಾಲಕರಿಂದ ನಿರ್ಬಂಧದಲ್ಲಿಡಲ್ಪಟ್ಟಿದೆ ; ಭೂಸುರಲೋಕದ ಸುಧೆಯೋ ಭಕ್ತ ಬೃಂದಕ್ಕೆ ಶಿಷ್ಯವಾತ್ಸಲ್ಯದಿಂದ ಬೀರಲ್ಪಟ್ಟಿದೆ.

**(3) ಕಾಮಧೇನು—**

(ಟ) ಸುರಲೋಕದ ಕಾಮಧೇನು ನಿನ್ನಿಂದ ಭಿನ್ನವಾಗಿ ಅನೇಕಸಾರಿ ಅಪಹರಿಸಲ್ಪಟ್ಟಿದೆ. ಶ್ರೀರಾಘವೇಂದ್ರಾತ್ಮಕ ಭೂಸುರಲೋಕದ ಕಾಮಧೇನುವೋ ಯಾವ ನಿರ್ಬಂಧಕ್ಕೂ ಒಳಗಾಗಿಲ್ಲಾ !

(ಠ) ಸುರಲೋಕದ ಕಾಮಧೇನು ನಾಲ್ಕು ಸ್ತನಗಳಿಂದ ಏಕಗುಣಾತ್ಮಕ ಕಾಮಿತಾರ್ಥವನ್ನು ಕೊಡುವುದು. ಭೂಸುರ ಲೋಕದ ಕಾಮಧೇನುವು ತನ್ನಲ್ಲಿರುವ—

(ಅ) ರಾಮರೂಪದಿಂದ—ರಾಜ್ಯವು.
(ಆ) ಕೃಷ್ಣರೂಪದಿಂದ—ಸಂತಾನಸಂಪತ್ತು.
(ಇ) ವ್ಯಾಸರೂಪದಿಂದ—ಬ್ರಹ್ಮಜ್ಞಾನವು.
(ಈ) ನರಹರಿರೂಪದಿಂದ—ಅನಿಷ್ಟ ಪರಿಹಾರವು ಎಂಬ ಚತುರ್ವಿಧ ಪುರುಷಾರ್ಥ ಗಳನ್ನು ಕೊಡುವುದು.

(ಡ) ಸುರಲೋಕದ ಕಾಮಧೇನು ಸರ್ವಸಾಮಾನ್ಯ ಜನರಿಗೆ ಅತಿದೂರ, ಅತ್ಯಸಾಧ್ಯವಾಗಿರುವುದು. ಭೂಸುರಲೋಕದ ಕಾಮಧೇನು "ಕರದಲ್ಲಿಗೆ ಬರುವುದು"

(ಢ) ಸುರಲೋಕದ ಕಾಮಧೇನು ದೇವೇಂದ್ರನ ನಂದನವನದಲ್ಲಿ ಉಂಡು, ಉಬ್ಬಿ, ಕೊಬ್ಬಿದ್ದರೇ, ಭೂಸುರಲೋಕದ ಕಾಮಧೇನು ಶ್ರೀಮನ್ಮಧ್ವಾಚಾರ್ಯರವರ "ಆನಂದವನ"ದಲ್ಲಿ ಸ್ವೇಚ್ಛೆಯಾಗಿ ಸಂಚರಿಸಿ

ಉಂಡು, ಮಿಂದು, ನೆಮರು ಹಾಕುತ್ತಾ (ಮನನಾದಿಗಳನ್ನು ಮಾಡುತ್ತಾ) ಬೃಂದಾವನದಲ್ಲಿ ಶ್ರೀ ಮೂಲ ರಾಮಧ್ಯಾನರತವಾಗಿದೆ.

**(4) ಕಲ್ಪವೃಕ್ಷ—**

(ತ) ಸುರಲೋಕದ ಕಲ್ಪವೃಕ್ಷವು ಸುರಲೋಕಕ್ಕೆ ಬಂದು ಸೇವೆ ಮಾಲ್ಕ ಕೆಲವರಿಗೆ ಮಾತ್ರ ಫಲದಾಯಕವಾಗಿದೆ. ಭೂಸುರಲೋಕದ ಕಲ್ಪವೃಕ್ಷವೋ ಪಕ್ಷಪಾತವಿಲ್ಲದೇ ಇದ್ದಲ್ಲಿಯೇ ಭಜಿಸುವ ಜನರ ಯೋಗ್ಯತಾನುಗುಣ ಫಲದಾಯಕವಾಗಿರುವುದು.

(ಥ) ಸುರಲೋಕದ ಕಲ್ಪವೃಕ್ಷಾಶ್ರಯದಲ್ಲಿರುವವರ ಪುಣ್ಯನಾಶವಾಗಲು "ಕ್ಷೀಣೇಪುಣ್ಯೇ ಮರ್ತ್ಯ ಲೋಕಂ ವಿಶಂತಿ" ಎಂಬ ಶೃತ್ಯನುಸಾರವಾಗಿ ಭೂಲೋಕಕ್ಕೆ ಹಿಂದಿರುಗುವರು. ಭೂಸುರಲೋಕದ ಕಲ್ಪ ವೃಕ್ಷಾಶ್ರಿತರು ಶಾಶ್ವತವಾದ ಲೋಕವನ್ನು ಕುರಿತು ಏರುವರು.

**(5) ರಂಭಾದಿ ಅಪ್ಸರಸ್ತ್ರೀಯರು—**

ನಿನ್ನ ಸಭಾಭೂಷಣಗಳಾದ ರಂಭೆಯು ತನ್ನ ವಿಲಾಸದಿಂದ ನಿನ್ನ ಚಿತ್ತವನ್ನೇ ಸ್ತಂಭಿಸುವಂತೆ ಮಾಡುವಳು. ಶ್ರೀರಾಘವೇಂದ್ರರ ಸಭೆಯಲ್ಲಿಯೋ ಅದೇ ರಂಭೆಯು ಅವರ ವೈಭವಕ್ಕೆ ಬೆರಗಾಗಿ ತಾನೇ ಸ್ತಂಭೀಭೂತಳಾಗಿ ಮಠಸ್ಥ ಪ್ರತಿಸ್ತಂಭಕ್ಕು ನಿಂತು ಶೋಭಿಸುವಳು.

**(6) ದಿಕ್ಪಾಲಕರು—**

**(1) ಇಂದ್ರ—**(ಪ) ನೀನು ಒಂದೇ ದಿಕ್ಕಿನ ಅಧಿಪತಿಯಾಗಿರುವಿ. ಆದರೆ ಶ್ರೀ ರಾಘವೇಂದ್ರ ಯತಿ ವರ್ಯರು ಸರ್ವ ದಿಕ್ಕುಗಳಿಗೂ ಅಧಿಪತಿಯಾಗಿರುವರು.

(ಫ) ಇಂದ್ರ ಶಬ್ದ ನಿನಗೆ ಮಾತ್ರ ಪರಮಾತ್ಮನಿಂದ ದತ್ತವಾಗಿದೆ. ಮಂತ್ರಾಲಯದಲ್ಲಿ ಶ್ರೀ ರಾಘವೇಂದ್ರ ಯತೀಶ್ವರರಿಗಲ್ಲದೇ ಅವರ ಪೀಠಸ್ಥ ವಂಶಜ ಯತಿವರ್ಯರಿಗೆಲ್ಲರಿಗೂ "ಇಂದ್ರ" ಶಬ್ದವು ಅಲಂಕಾರಾಭರಣವಾಗಿದೆ.

**(2) ಅಗ್ನಿಯು—**

ನಿನ್ನ ಅಧೀನದಲ್ಲಿ ಒಂದು ಕೋಣಾಧಿಪನಾಗಿದ್ದರು ಶ್ರೀ ಮಂತ್ರಾಲಯದಲ್ಲಿ ಮೂರು ರೂಪವನ್ನು ತಾಳಿ

(ಕ) ಭೂಸುರರ ಜಠರದಲ್ಲಿ .... ಅಗ್ನಿರೂಪ

(ಖ) ಭೂಸುರರ ಮುಖದಲ್ಲಿ .... ತೇಜೋರೂಪ

(ಗ) ಶ್ರೀ ಸುಶೀಲೇಂದ್ರ ಯತಿವರ್ಯರಿಂದ ನಿರ್ಮಿತವಾದ ಪಾಕಶಾಲೆಗಳಲ್ಲಿ ಭೀಮಪಾಕಕ್ಕೆ ಸಹಾಯಕಾರಿಯಾಗಿ ವಿರಾಜಿಸುತ್ತಿರುವನು.

**(3) ಯಮನು—**

ಯಮ ನಿಯಮವೆಂದು ಎರಡು ಧರ್ಮರೂಪಗಳನ್ನು ತಾಳಿ ಶ್ರೀ ರಾಘವೇಂದ್ರ ಯತೀಂದ್ರರ ರಥೋತ್ಸವದ ವಿಜೃಂಭಣೆಯನ್ನು ನಡೆಸಲು ರಘುಕುಲತಿಲಕ ಶ್ರೀ ರಾಘವೇಂದ್ರನ ಆಜ್ಞಾಬದ್ಧನಾಗಿರುವನು.

**(4) ವರುಣ—**

ಹಿಂದೆ ದರ್ಭಶಯನನಾದ ಶ್ರೀ ರಾಘವೇಂದ್ರನ ಶಾಸನಕ್ಕೆ ಭಯಪಟ್ಟು ವರುಣನು ಇಂದಿನ ದಿನ ತುಂಗಾನದಿಯಿಂದ ಪರಮಾತ್ಮನ ಅಭಿಷೇಕಕ್ಕೆ ಅಗ್ರೋದಕವನ್ನು ತಂದಿಟ್ಟು ಇರುವನು.

**(5) ಧನಪ (ಕುಬೇರ)—**

ಶ್ರೀ ರಾಮಚಂದ್ರನ ಆಜ್ಞಾನುಸಾರಿಯಾಗಿ ಇಂದಿನದಿನ ಶ್ರೀ ರಾಘವೇಂದ್ರ ವಂಶಜರಾದ ಶ್ರೀ ಸುಯಮೀಂದ್ರತೀರ್ಥರ ಕರದಿಂದ ತನ್ನ ಕೋಶವನ್ನೆಲ್ಲಾ ಭೂಸುರರಿಗೆ ಕೊಡಿಸುತ್ತಾ, ಶ್ರೀ ಸುಯಮೀಂದ್ರ ತೀರ್ಥರನ್ನು "ಕಲಿಯುಗ ಕರ್ಣ"ರೆಂದು ಸರ್ವ ಜನರಿಂದ ಕೀರ್ತಿಯನ್ನು ಕೊಡಿಸುತ್ತಿರುವನು.

ಇನ್ನೆಷ್ಟೆಂದು ವರ್ಣಿಸಲಿ ಈ ಮಂತ್ರಾಲಯದ ಸೊಬಗನ್ನು! ನಾನು ಜಾಗ್ರತೆಯಾಗಿ ಹೊರಡುವೆನು. "ಆಲಸ್ಯಮಮೃತಂ ವಿಷಂ" ಎಂದು ತಿಳಿ. ತ್ವರಿತದಲಿ ಪ್ರಯಾಣಕ್ಕೆ ಸನ್ನದ್ಧರಾಗಿರಿ.

(ಈ ಪ್ರಕಾರ ಹೇಳಿ ನಾರದರು ಭೂಲೋಕಕ್ಕೆ ವೀಣಾಪಾಣಿಯಾಗಿ ಜನಾರ್ದನ ಚರಣ ಸರಸೀರುಹಯುಗಳ ಸ್ಮರಣ ಸುಧಾರಸ ಪಾನಪರವಶರಾಗಿ ತುಂಗಾತೀರಕ್ಕೆ ತೆರಳಿದರು.)

(ಸರ್ವಾಭರಣಭೂಷಿತಳಾಗಿ ತುಂಗೆಯು ಉತ್ಸವಕ್ಕಾಗಿ ಬರುವ ಭಕ್ತಾದಿಗಳಿಗೆ ಸ್ವಾಗತ ಕೊಡಲು ಮೂರ್ತಿಮಂತಳಾಗಿ ಕೈ ಜೋಡಿಸಿ ನಿಂತಿರುವಳು. ನಾರದರು ಬರುವುದನ್ನು ನೋಡಿ ತುಂಗೆಯು ಆದರದಿಂದ ವಂದಿಸಿ)

**ತುಂಗ:**—ದಯಮಾಡಿಸಬೇಕು, ದಯಮಾಡಿಸಬೇಕು, ನಾರದರೇ! ತಮ್ಮ ಪಾದಧೂಳಿಯಿಂದ ನನ್ನನ್ನು ಪಾವನ ಮಾಡಬೇಕು.

**ನಾರದ:**—ನಿನಗೆ ಕಲ್ಯಾಣವಾಗಲಿ! (ಎನ್ನುತ್ತಾ ಮಂತ್ರಾಲಯ ಪುರಪ್ರವೇಶಮಾಡಿ)

**ರಥವಾನೇರಿದ ರಾಘವೇಂದ್ರಾ । ರಾಜಿತ ಗುಣಸಾಂದ್ರಾ ॥**

(ಎಂದು ಗಾಯನ ಮಾಡುತ್ತಾ, ರಥೋತ್ಸವದ ವೈಭವವನ್ನು ನೋಡಿ ಈ ರೀತಿ ವರ್ಣನ ಮಾಡುವರು.)

**ನಾರದ:**—ಓಹೋ! ರಥೋತ್ಸವದ ಸಂಭ್ರಮವು ಜರಗುತ್ತಿರುವುದು. ದೇವತೆಗಳೆಲ್ಲರೂ ವಿಮಾನಾರೂಢರಾಗಿ ಪಾರ್ಶ್ವೈಕ ಸಂಶ್ರಯರಾಗಿರುವರು; ಇತ್ತಲೀಕಡೆ ವಶಿಷ್ಠಾದಿ ಋಷಿಗಳು ರಾಮಧ್ಯಾನಪರರಾಗಿರುವರು. ದೇವಗಂಧರ್ವರೋ "ಬಾಗಿಭಜಿಸುವೆ ಯತಿಯೆ | ರಾಗದಿಂದಲಿ ನಿನ್ನ || ತ್ಯಾಗಿಕುಲತಿಲಕ ಶ್ರೀ | ರಾಘವೇಂದ್ರಾಗ್ರಣಿಯೆ ||" "ಪಾಲಯ ಶ್ರೀ ಮಂತ್ರಾಲಯ ನಿಲಯ | ಮೂಲೇಲಾಜನಿ ಜಾನಿಪದಾರ್ಥಕ||" "ಧೀರಾ ಶ್ರೀ ರಾಘವೇಂದ್ರ | ವರ ತುಂಗಾವಿಹಾರ ||"—ಮುಂತಾಗಿ ಇಂಪಾದ ಗಾನ ಮಾಡುತ್ತಾ ಮುಂದುವರಿಯುತ್ತಿರುವರು!! ಇದೇನು ಕೌತುಕ! ತ್ರಿಮೂರ್ತಿಗಳೂ ಸಹ ಉತ್ಸವ ದರ್ಶನಾಪೇಕ್ಷಿಗಳಾಗಿ ವಿಜಯಂಗೈಸಿರುವರಲ್ಲಾ!! ನಾನೇ ಕಾಲವಿಳಂಬ ಮಾಡಿದೆ. ಇಗೋ ಇಂದ್ರ ಶಚಿಯರು ಈಗತಾನೆ ಬಂದಿರುವರು.

(ಗರುಡಾರೂಢರಾದ ಸಾಕ್ಷಾತ್ ರುಕ್ಮಿಣೀ ಸತ್ಯಾ ಸಮೇತನಾದ ಶ್ರೀಹರಿಯನ್ನು ನೋಡಿ)

**ವನನಮಾಲೀ ಜಯ । ವನಮಾಲೀ ಜಯ ।**
**ಗೋವಿಂದ ಗೋಪಾಲ ಕೃಷ್ಣ ಮುರಾರೇ ।**
**ಯಾದವ ನಂದನ ಯದುಕುಲ ವರ್ಧನ ॥**

(ಎಂದು ಗಾಯನ ಮಾಡುತ್ತಾ ಪರಮಾತ್ಮನಿಗೆ ಸಾಷ್ಟಾಂಗ ಪ್ರಣಾಮಗಳನ್ನು ಮಾಡಿ ನಲಿಯುತ್ತಾ ನಿಲ್ಲುವರು. ಸ್ವಲ್ಪಕಾಲವಾದಮೇಲೆ ರಥವನ್ನೀಕ್ಷಿಸಿ ಈರೀತಿ ವರ್ಣನ ಮಾಡುವರು.)

**ರಥವರ್ಣನೆ**—ಓಹೋ! ರಥೋತ್ಸವವು ಈಗತಾನೇ ಉಪಕ್ರಮವಾಗಿರುವುದು.

**1.** ರಥದ ಮೇಲ್ಭಾಗದಲ್ಲಿರುವ **ಹೇಮಮಯ ಕಲಶವು** "ಹರಿಃ ಪರತರಃ" ಎಂಬುವ ತತ್ತ್ವವನ್ನು ಸೂಚಿಸುವಂತಿರುವುದು.

**2.** ಅದರ ಕೆಲಭಾಗವು ಚಿತ್ರವಿಚಿತ್ರವಾದ ಪಟಗಳಿಂದಲೂ, ಸುತ್ತಮುತ್ತ ಪತಾಕೆಗಳಿಂದಲೂ **ನಿಬಿಡೀಕೃತ**ವಾಗಿರುವುದನ್ನು ನೋಡಿದರೆ "ಭೇದೋ ಜೀವಗಣಾ ಹರೇರನುಚರಾಃ" ಎಂಬ ಉಕ್ತಿಯನ್ನು ಜ್ಞಪ್ತಿಗೆ ತರುವುದು.

**3.** **ರಥದ ಮಂದಗಮನವೂ** ಮತ್ತು ಮಿಳಿತವಾದ ಭಕ್ತವೃಂದದ ಮಂದಗಮನವೂ ನೋಡಿದರೆ "ಪ್ರವಾಹತಃ ಜಗತ್ಸತ್ಯತ್ವವನ್ನು" ಸೂಚಿಸುವುದು !!

**4.** **ರಥೋತ್ಸವದ ವೈಭವಜನ್ಯ ಸುಖವು** "ಮುಕ್ತಿರ್ನೈಜ ಸುಖಾನುಭೂತಿಃ" ಎಂಬುವ ಉಕ್ತಿಯ ಸಾದೃಶ್ಯವಾಗಿರುವುದು !!

**5.** ಇಲ್ಲಿ ಮಿಳಿತರಾದ ಭಕ್ತಜನರಿಂದ ಜಗ್ಗಲ್ಪಟ್ಟ **ರಥದ ಮಿಣಿಯು** (ರಜ್ಜು) ನೋಡಿದರೆ "ಭಕ್ತಿಶ್ಚ ತತ್ಸಾಧನಂ" ಎಂಬುವ ಉಕ್ತಿ ಸ್ಮರಣೆಗೆ ತಂದುಕೊಡುವುದು !

**6.** ಉತ್ಸವದರ್ಶನಾಪೇಕ್ಷೆಯಿಂದ ನೆರೆದಿರುವ **ನರೋತ್ತಮರು, ಋಷಿಗಳು** ಗಗನಮಾರ್ಗದಲ್ಲಿ ವಿಮಾನಾರೂಢರಾಗಿ ಪುಷ್ಪವೃಷ್ಟಿ ಮಾಡಲು ಕಾದಿರುವ **ದೇವತೆಗಳು** "ಪ್ರತ್ಯಕ್ಷ ಅನುಮಾನ ಆಗಮ" ವೆಂಬೋ ಪ್ರಮಾಣತ್ರಯಗಳಂತೆ ಭಾಸವಾಗುವರು.

**7.** **ರಥದ ನಾಲ್ಕು ಚಕ್ರಗಳು** ಅದರ ಮೇಲೆ ಕಟ್ಟಿರುವ ರಥದ ಕ್ರಮವು, ತದುಪರಿ ಇರುವ **ಸ್ವರ್ಣಮಯ ಕಲಶವು** ನೋಡಿದರೆ "ಅಖಿಲಾಮ್ನಾಯೈಕ ವೇದ್ಯೋ ಹರಿಃ" ಎಂಬುವುದನ್ನು ಸೂಚಿಸುವುದು.

**8.** ರಥಸ್ಥ ಶ್ರೀ ರಾಘವೇಂದ್ರರ ಹೃದಯದಲ್ಲಿ ವಿರಾಜಿಸುತ್ತಿರುವ ಶ್ರೀ ಮೂಲರಾಮ ಪ್ರತೀಕವೋ ದೇಹರಥದಲ್ಲಿ ಹೃದ್ಗುಹಾ ವಾಸಿಯಾದ **ಬಿಂಬಮೂರ್ತಿ**ಯಂತೆ ಭಾಸವಾಗುವುದು. ಶ್ರೀ ಮೂಲರಾಮ ಪ್ರತೀಕ ಪಾದಪಂಕಜ ಧ್ಯಾನ ನಿರತರಾದ ಶ್ರೀಮದ್ರಾಘವೇಂದ್ರ ಯತಿಸಾರ್ವಭೌಮರೋ, ಬಿಂಬಮೂರ್ತಿಯನ್ನು ಆಶ್ರಯಿಸಿದ ಶ್ರೀ ಮುಖ್ಯಪ್ರಾಣರಂತೆ ಕಾಣುವರಲ್ಲಾ !! ಅವರ ಪಾದಾವಲಂಬಿಗಳೂ, ವಂಶಜರೂ ಆದ ಶ್ರೀ ಸುಯಮೀಂದ್ರತೀರ್ಥ ಶ್ರೀಪಾದಂಗಳವರು "ಮುಖ್ಯ ಪ್ರಾಣದೇವರ ಪಾದಾವಲಂಬಿಯಾದ **ಸಾಧನಜೀವಿ**ಗಳಂತೆ ಕಾಣುವರಲ್ಲಾ !! ಆಹಾ! ಇಂದಿನ ದಿನವೇ ಸುದಿನವು !!!

(ಹೀಗೆ ನಾರದರು ಅನುಸಂಧಾನ ಮಾಡುತ್ತಾ ನಿಂತಿರಲು ಭೈಷ್ಮೀ ಸತ್ಯಾ ಸಹಿತನಾದ ಶ್ರೀ ಕೃಷ್ಣನು ಮುಂದುವರಿದು ರಥದ ಮುಂಭಾಗದಲ್ಲಿ ಅಂತರಿಕ್ಷದಲ್ಲಿ ನಿಂತು ಶ್ರೀ ಗುರುರಾಜರಿಗೆ ಪುಷ್ಪವೃಷ್ಟಿ ಮಾಡಿ)

**ಶ್ರೀ ಕೃಷ್ಣ** :—ರುಕ್ಮಿಣೀ! ಶ್ರೀ ಮೂಲರಾಮಾರ್ಚನಾ ನಿರತನೂ, ಮದ್ಭಕ್ತ ಶಿಖಾಮಣಿಯೂ ಆದ ರಾಘವೇಂದ್ರನಿಗೆ ಈ ಉತ್ಸವದಲ್ಲಿ ಏನು ಪಾರಿತೋಷಕವನ್ನು ಕೊಡೋಣ ?

**ರುಕ್ಮಿಣಿ** :—ನೀವೇನು ಕೊಡುವಿರಿ ? ಮೊದಲು ಹೇಳಿರಿ.

**ಕೃಷ್ಣ:**—ಪ್ರಿಯೆ! ನಾನು ಹಿಂದೆಯೇ ಇವನಿಗಾಗಿ ಕಂಬದಲ್ಲಿ ಅವತರಿಸಿದಾಗಲೇ "ಮದ್ಭಕ್ತಾ ಏ ತ್ವಾಂ ಅನುವ್ರತಾಃ" ಎಂದು ಅನುಗ್ರಹಿಸಿದ್ದೇನೆ. ಮತ್ತು ಅನಿಷ್ಟ ಪುಣ್ಯನಿವಾರಣೆಯಾದೊಡನೆ ನನ್ನ ಪಾದದಲ್ಲಿ ಇವನಿಗೆ ಸ್ಥಳ ಕೊಡುವೆನೆಂದು ವರಪ್ರದಾನ ಮಾಡಿದ್ದೇನೆ. ಇನ್ನೇನು ಕೊಡಲಿ? ಆದ್ದರಿಂದ ನೀನೇನು ಕೊಡುವೆ ಹೇಳು!

**ರುಕ್ಮಿಣಿ:**—ನಾಥಾ! ತಮ್ಮ ಆಜ್ಞಾ ಪ್ರಕಾರವಾಗಿ "ಶ್ರೀ" ಎಂಬ ಅಕ್ಷರವನ್ನು "ರಾಘವೇಂದ್ರ" ಎಂಬ ಪದಕ್ಕೆ ಪೂರ್ವದಲ್ಲಿ ಸೇರಿಸಲು (ಇವರ ಪೀಠಸ್ಥ ಯತಿಗಳಿಗೂ ಸಹ) ಅಪ್ಪಣೆ ಕೊಡಬೇಕಾಗಿ ಪ್ರಾರ್ಥಿಸುತ್ತೇನೆ.

**ಕೃಷ್ಣ:**—ತಥಾಸ್ತು! ಸತ್ಯಾ!! ನೀನು ಏನು ಕೊಡಲು ನಿಶ್ಚಯಿಸಿರುವೆ?

**ಸತ್ಯಾ:**—(ತನ್ನನ್ನು ಮೊದಲು ಕೇಳಲಿಲ್ಲೆಂಬ ಕೋಪದಿಂದ) ನೀವೀರೀತಿ ನನ್ನನ್ನು ಅವಮಾನ ಪಡಿಸುವಿರೆಂದರಿತು ನಾನು ಹಿಂದೆಯೇ ಇವರ ವಂಶಜರಾದ ಯತಿವರ್ಯರೆಲ್ಲರ ನಾಮದ ಮೊದಲನೆಯ ಅಕ್ಷರವು ನನ್ನ "ಸತ್ಯಾ" ಎಂಬ ಹೆಸರಿನ ಮೊದಲನೆಯ ಅಕ್ಷರವಾದ "ಸ"ಕಾರವಾಗಿರಲೆಂದು ಅನುಗ್ರಹಿಸಿದ್ದೇನೆ........"ಸುಮತೀಂದ್ರ, ಸುಕೃತೀಂದ್ರ ಸುಶೀಲೇಂದ್ರ" ಮುಂತಾಗಿರುವುದೇ ಇದಕ್ಕೆ ಸಾಕ್ಷಿ!!

**ಕೃಷ್ಣ:**—(ನಗುತ್ತಾ) ಸತ್ಯಾ! ನಾನೇ ಮೊದಲು ಪಾರಿತೋಷಕವನ್ನು ಕೊಟ್ಟವಳೆಂದು ನಿನಗೆ ಅಹಂಕಾರವಿರಬಹುದು. ಅದು ವ್ಯರ್ಥ!!

**ಸತ್ಯಾ:**—ಅದು ಹೇಗೆ?

**ಕೃಷ್ಣ:**—ಹೇಗೆಂದರೆ ರುಕ್ಮಿಣಿಯು ಅನುಗ್ರಹಿಸಿರುವ "ಶ್ರೀ" ಎಂಬ ಅಕ್ಷರವಾದ ಮೇಲೆಯೇ ನಿನ್ನ "ಸು" ಎಂಬ ಅಕ್ಷರವು ಬರುವುದು. ಉದಾ:—"ಶ್ರೀ ಸುಶೀಲೇಂದ್ರ" ಈಗ ಹೇಳು ಯಾರು ಮೊದಲು ಕೊಟ್ಟಹಾಗಾಯ್ತು.

**ರುಕ್ಮಿಣಿ:**—ನಾಥಾ! ಸಾಕುಮಾಡಿರಿ ನಿಮ್ಮ ಸರಸವನ್ನು.

**ಕೃಷ್ಣ:**—(ಸತ್ಯಭಾಮೆಯನ್ನು ಸಂತಯಿಸಿ) ಸತ್ಯಾ! ಅಷ್ಟು ಬಿರಸು ನುಡಿ ಯಾತಕ್ಕೆ? ಕೊಟ್ಟಿದ್ದರೆ ಆಯಿತು. ಸಂತೋಷ.

(ನಂತರ ಬ್ರಹ್ಮ ಸರಸ್ವತಿಯರು ಮುಂದುವರಿಯುವರು)

**ಬ್ರಹ್ಮದೇವರು:**—ಇಂತಹ ಉತ್ಸವಕಾಲದಲ್ಲಿ ನನ್ನ ಚತುರ್ಮುಖತ್ವವನ್ನೇ ಇವರಿಗೆ ಪಾರಿತೋಷಕವಾಗಿ ಕೊಟ್ಟು ಇವರ ಬೃಂದಾವನದ ನಾಲ್ಕು ದಿಕ್ಕುಗಳಲ್ಲಿಯೂ ಅಲಂಕರಿಸುವ ಸೌಭಾಗ್ಯವು ಇವರಿಗೆ ದೊರೆಯಲಿ! ಎಂದು ಹರಸಿದರು.

**ಸರಸ್ವತೀ:**—ಪ್ರಭೋ! ಹಿಂದೊಮ್ಮೆ ನಾನಿವರಿಗೆ ಪ್ರತ್ಯಕ್ಷಳಾಗಿ ಪರಮಹಂಸಾಶ್ರಮವನ್ನು ಸ್ವೀಕರಿಸುವಂತೆ ಉಪದೇಶಿಸಿ ಇವರ ರಸನದಲ್ಲಿ ನರ್ತಿಸಿದ್ದೆನು. ಇವರು ವೈಯ್ಯಾಕರಣಿಕರ ವಂಶಜರು ಮತ್ತು ವೀಣಾವಿದ್ಯದಲ್ಲಿ ಮಹಾ ನಿಪುಣರಾದ ವೆಂಕಣ್ಣಭಟ್ಟರೆಂದು ಪ್ರಖ್ಯಾತಿ ಹೊಂದಿದ ಭೂಸುರವರ್ಯರು. ಆದಕಾರಣ ಇವರ ಪ್ರೀತಿಗಾಗಿ ಇವರನ್ನಾಶ್ರಯಿಸಿ ಭಜಿಸಿದವರಿಗೆಲ್ಲಾ "ವೀಣಾ ವಿದ್ಯಾ ಪ್ರವೀಣ"ತೆಯನ್ನೂ ಸದ್ವಿದ್ಯೆಯನ್ನೂ ಅನುಗ್ರಹಿಸುವೆನು.

(ಮಹಾ ಸಂಭ್ರಮಯುಕ್ತ ಭಯದಿಂದ ಮುಂದುವರಿದು)

**ಶಚೀ :**—ನಾರದರೇ! ನಾರದರೇ!! ಈ ಸಂಭ್ರಮದಲ್ಲಿ ನಾವು ದಂಪತಿಗಳು ಉಭಯರು ಶ್ರೀ ರಘು ರಾಮನಿಗೆ ಆರತಿಮಾಡಿ ಶ್ರೀ ರಾಘವೇಂದ್ರಯತಿಚಂದ್ರರಿಗೆ ಪಾರಿತೋಷಕವನ್ನು ಕೊಡುವಇಚ್ಛೆಯು ಇದೆ; ಆದರೆ, ತ್ರಿಲೋಕಾಧಿಪತಿಯಾದ ದೇವೇಂದ್ರರು ಕಾಣುವುದಿಲ್ಲವಲ್ಲ! ರಥೋತ್ಸವವು ಪ್ರಾರಂಭವಾಗುತ್ತಿದೆ. ಸ್ವಾಮೀ ತಾವು ನಮ್ಮ ಯಜಮಾನರನ್ನು ನೋಡಿದಿರಾ?

**ನಾರದ :**—ತಾಯೀ! ಉತ್ಸವಕಾರ್ಯಗಳಲ್ಲಿ ಮತ್ತು ಪಟ್ಟಾಭಿಷೇಕ, ರಜತೋತ್ಸವಾದಿ ಶುಭಕಾಲದಲ್ಲಿ ಭೂವರರು ತಮ್ಮ ಅಮಾತ್ಯ ವರ್ಗಕ್ಕೆ ಮತ್ತು ಪ್ರಸಿದ್ಧ ಪುರುಷರಿಗೆ "ರಾಷ್ಟ್ರಸೇವಾಸಕ್ತ, ರಾಜಶೇಖರ, ಕವಿ ಕುಲ ಸಾರ್ವಭೌಮ, ರಾಷ್ಟ್ರಬಂಧು, ಪುರಾಣಕೇಸರಿ" ಇತ್ಯಾದಿ ಬಿರುದುಗಳನ್ನು ಅನುಗ್ರಹಿಸುವ ಪದ್ಧತಿ ಯುಂಟು. ಈ ಉತ್ಸವಕಾಲದಲ್ಲಿ ಕೂಡ "ಶ್ರೀ ರಘುರಾಮಚಂದ್ರನು" ನಿಮ್ಮ ಪತಿಗೆ ಯಾವುದಾದರೂ ಬಿರದು ಕೊಡಲು ಆಹ್ವಾನ ಮಾಡಿರಬಹುದು. ಯಾಕೆಂದರೆ, ನಿಮ್ಮ ಪತಿಗೆ ಬಿರುದು ಸಂಪಾದನೆಯಲ್ಲಿ ಬಹಳ ಆಶೆಯುಂಟು. "ಅಹಲ್ಯಾಜಾರ", "ಸಹಸ್ರಾಕ್ಷ", "ಮುದರಿವಾಹನ" ಇತ್ಯಾದಿ ಬಿರುದುಗಳನ್ನು ಸಂಪಾದಿಸಿದ್ದರೂ ತಾನು **ರೂಪಾಂತರ** ಹೊಂದಿದ್ದಿಲ್ಲ. ಕೇವಲ **ನಾಮಾಂತರ**ಗಳಾಗಿ ಪರಿಣಮಿಸಿದ್ದವು. ಪ್ರಕೃತದಲ್ಲಿ ನಿಮ್ಮ ಯಜಮಾನರು **ರೂಪಾಂತರವೇ** ಹೊಂದಿರುತ್ತಾರೆ. ಅಗೋ, ನೋಡು ತಾಯಿ! ಸುರಾಧಿಪನಾದ ಮತ್ತು **ನಗಾರಿ** (ನಗ–ಪರ್ವತಗಳ, ಅರಿ–ಶತ್ರು) ದೇವೇಂದ್ರನು ಭೂಸುರಾಧಿಪರಾದ ಶ್ರೀ ರಾಘವೇಂದ್ರರ ರಥದ ಮುಂಭಾಗದಲ್ಲಿ ಮಂದಗಮನದಿಂದ ಹೋಗುವ ಮದ್ದಾನೆಯ ಮೇಲೆ **ನಗಾರಿ** (ಢಂಕಾ ಭೇರಿ) ರೂಪನಾಗಿ ಪರಿಣಮಿಸಿ ಮಠದ ಭೃತ್ಯರಿಂದ ತಾಡನ ಹೊಂದುವ ಅವಸ್ಥೆ ಬಂದಿದೆ! ರಥೋತ್ಸವದ ವೈಭವವು ಮುಗಿಯುವವರೆವಿಗೂ ನಿಮ್ಮ ಯಜಮಾನರು ಇದೇ ರೂಪದಿಂದ ಇರಬೇಕು. ಇದೂ ಕೂಡ ಶ್ರೀ ರಘುರಾಮನ ಸೇವೆ. ಕಾರಣ ನೀವು ಚಿಂತಿಸದಿರಿ ತಾಯಿ!

(ನಂತರ ನವಗ್ರಹ ದೇವತೆಗಳು ಮುಂದುವರಿದು ಬರುವರು.)

**ಸೂರ್ಯ :**—ನನ್ನ ವಂಶೋದ್ಭವನಾದ ಶ್ರೀ ರಾಘವೇಂದ್ರಾಂತರ್ಗತ ರಘುರಾಮನು ನನಗೆ ಅಭಿಮುಖ ನಾಗಿ ರಥಾರೂಢನಾಗಿ ನಿಂತಿರುವನು. ಕಾಲನಿಯಮದಿಂದ ನಾನು ಅಸ್ತಾದ್ರಿಯನ್ನು ಕುರಿತು ಪ್ರಸ್ಥಾನ ಮಾಡಬೇಕಾಗಿದೆ. ಸ್ವಾಮೀ! ಇಗೋ ನನ್ನ ಅನಂತ ವಂದನೆಗಳು.

(ಎನ್ನುತ್ತಾ ತನ್ನ ಅರುಣಕರಗಳನ್ನು ಚಾಚಿ ಶ್ರೀ ರಾಮಚಂದ್ರನ ಚರಣಾಬ್ಜಗಳಿಗೆ ನಮಸ್ಕರಿಸಿ ಅಸ್ತಮಿಸಿದನು.)

**ಚಂದ್ರ :**—ಇದೇ ಸುಸಮಯವು! ಇಂದಿನ ದಿನವೇ ಶುಭದಿನವು!! ನನ್ನ ವಂಶೋದ್ಭವನಾದ ಶ್ರೀ ರಾಘವೇಂದ್ರಾಂತರ್ಗತ ಯಾದವೇಂದ್ರನು ನನಗೆದುರಾಗಿ ರಥಾರೂಢನಾಗಿ ಮೆರೆಯುತ್ತಿರುವನು. ಎಂದು ತನ್ನ ಅಮೃತಕಿರಣಗಳಿಂದ ಶ್ರೀ ಕೃಷ್ಣನ ಪಾದಗಳೆಂಬ ಇಂದೀವರಗಳನ್ನು ತಾಕಿ ವಂದಿಸಿ ಶ್ರೀ ರಾಘವೇಂದ್ರರ ರಥೋತ್ಸವ ಮಹೋತ್ಸವದಲ್ಲಿ ಮಹದಾಹ್ಲಾದವನ್ನು ಹೊಂದಿ ಅಲ್ಲಿ ಮಿಳಿತರಾದ ಚಂದ್ರಮುಖಿಯರ ಮುಖಸ್ವರೂಪವನ್ನು ತಾಳಿ ಮೆರೆದನು.

**ಮಂಗಳ :**—ನಾನು ಈ ಮಹೋತ್ಸವದಲ್ಲಿ ಎಲ್ಲಿ ನಿಂತರೆ ಶೋಭಾಯಮಾನವಾಗುವುದು? (ಯೋಚಿಸಿ) ವಾದ್ಯಗಳಲ್ಲಿಯೂ, ವೇದಘೋಷಗಳಲ್ಲಿಯೂ, ಸುಮಂಗಲೆಯರು ಬೆಳಗುವ ಆರತಿಯಲ್ಲಿಯೂ ರಥಸ್ಥ ಶ್ರೀ ಪ್ರಹ್ಲಾದರಾಯರ ಮೂರ್ತಿಯಲ್ಲಿಯೂ ಪ್ರವೇಶಿಸಿ "ಮಂಗಳ ವಾದ್ಯ, ಮಂಗಳ ಘೋಷ, ಮಂಗಳಾರತಿ, ಮಂಗಳಮೂರ್ತಿಯಾಗಿ ಪರಿಣಮಿಸುವೆನು. (ಹಾಗೆಯೇ ಮಾಡಿ ಅಲ್ಲಿಗೂ ತೃಪ್ತಿ ಹೊಂದದೆ) "ಕುಜ"

ನೆಂಬ ನನ್ನ ದ್ವಿತೀಯರೂಪದಿಂದ ವಿಜೃಂಭಿಸಿ ಜಾತಕದಲ್ಲಿ ಕುಜದೋಷವಿರುವ ಪ್ರೌಢ ಕನ್ಯೆಯರಿಗೆ ಶ್ರೀ ರಾಘವೇಂದ್ರರು ಸಂಘಟಿಸುವ ವರಗಳ ಜಾತಕದಲ್ಲಿಯೂ ಸನ್ನಿಹಿತನಾಗಿ ವಿವಾಹಗಳನ್ನು ಸಾಂಗಗೊಳಿಸಿ ಶ್ರೀ ರಾಯರ ಅಘಟಿತ ಘಟನಾಶಕ್ತಿಯನ್ನು ಜಗತ್ತಿಗೆ ಪ್ರಕಾಶಮಾಡಿ ಸಂತುಷ್ಟನಾಗುವೆನು.

**ರಾಹು, ಕೇತು :**— ನಾವು ಶ್ರೀ ರಾಘವೇಂದ್ರರ ಮಠದ ಅದ್ವಿತೀಯ ಮರ್ಯಾದೆಯಾದ "ರಾಹು ಕೇತು ವಾದ್ಯ"ದಲ್ಲಿ ಸೇರಿ ಶ್ರೀ ಗುರುರಾಜರ ವೈಭವವನ್ನು ಸಾರುತ್ತೇವೆ. (ಹಾಗೆಯೇ ಮಾಡಿ ಅಲ್ಲಿಗೂ ತೃಪ್ತರಾಗದೆ) ನಾವು ಶ್ರೀ ಗುರುರಾಜರ ರಥದಲ್ಲಿರುವ ಧ್ವಜಪತಾಕೆಯಲ್ಲಿ ಸೇರಿ ಶ್ರೀ ಗುರು ಮಹಿಮೆಯನ್ನು ಎಲ್ಲೆಡೆಗೂ ಮೆರೆಸುವ !

**ಬುಧ :**— ನಾನು ಶ್ರೀ ಮಠದ ಆಸ್ಥಾನಪಂಡಿತರಲ್ಲಿಯೂ ಉತ್ಸವದಿದೃಕ್ಷುಗಳಾದ ಪಂಡಿತರಲ್ಲಿಯೂ ಸೇರುವೆನು. (ಇದರಿಂದ ಉಭಯ ಪಂಡಿತರಲ್ಲಿಯೂ ವಾಕ್ ಘರ್ಷಣ ಉಂಟಾಯಿತು. ಆಗ ಉದ್ದಾಮ ದೈವಶಾಲಿಗಳಾದ ಶ್ರೀ ಸುಯಮೀಂದ್ರತೀರ್ಥ ಶ್ರೀಪಾದಂಗಳವರ ಅರ್ಥಗರ್ಭಿತವಾದ ದೃಷ್ಟಿಯು ವಿದ್ವಾಂಸರ ಮೇಲೆ ಬೀಳಲು ಉಭಯ ಪಂಡಿತರುಗಳಲ್ಲಿಯೂ ಆ ಬುಧನು "ಸೌಮ್ಯ" ರೂಪವನ್ನು ತಾಳಿದನು.)

**ಗುರು :**— ನಾನು "ದೇವಗುರು"ವಾದರೆ ಶ್ರೀ ರಾಘವೇಂದ್ರರು "ಭೂದೇವ ಗುರುಗಳು." ನಾನು ಈ ಸಮಯದಲ್ಲಿ ಶ್ರೀ ರಾಯರಲ್ಲಿಯೇ ಸನ್ನಿಹಿತನಾದರೆ ಶ್ರೀ ಮೂಲರಾಮನ ಪೂಜೆಯು ಲಭಿಸುವುದು. (ಶ್ರೀ ರಾಯರಲ್ಲಿ ಸನ್ನಿಹಿತನಾಗುವನು. ಅಷ್ಟೇ ಸಾಲದೆ ಶ್ರೀಮತ್ಸುಶೀಲೇಂದ್ರತೀರ್ಥ ದರ್ಶಿತ ಮಾರ್ಗಾನುಗಾಮಿಗಳಾದ ಶ್ರೀ ಸುಯಮೀಂದ್ರತೀರ್ಥರಿಂದ ಏರ್ಪಡಿಸಲ್ಪಟ್ಟ ಬ್ರಾಹ್ಮಣಸುವಾಸಿನಿಯರ ಭೋಜನದಲ್ಲಿಯೂ, ದಕ್ಷಿಣೆಯಲ್ಲಿಯೂ ಸೇರಿಕ್ಕೊಂಡು "ಗುರುಭೋಜನ, ಗುರುದಕ್ಷಿಣೆ" ಎಂಬ ನಾಮಗಳಿಂದ ಮೆರೆದನು.)

**ಶುಕ್ರ :**— ಶ್ರೀ ಪ್ರಹ್ಲಾದರಾಜನು ನನ್ನ ಶಿಷ್ಯರ ವಂಶದಲ್ಲಿ ಅವತರಿಸಿದ ಮಹಾನುಭಾವನು, ದೇವ ಸ್ವಭಾವನು. "ದೇವಸ್ವಭಾವ"ನೆಂಬ ಕಾರಣದಿಂದಲ್ಲವೇ ದೇವಗುರುವು ನನಗಿಂತಲೂ ಪೂರ್ವದಲ್ಲಿಯೇ ಬಂದು ಉತ್ಸವದಲ್ಲಿ ಭಾಗವಹಿಸಿ "ಗುರುಭೋಜನ, ಗುರುದಕ್ಷಿಣೆ" ಎಂದು ಪ್ರಖ್ಯಾತನಾದನು !! ಇರಲಿ. ಮಿಳಿತ ಸುಜನರಿಗೆಲ್ಲರಿಗೂ ನಾನು ನನ್ನ ಮಹರ್ದೆಶೆಯನ್ನು ಬೀರುವೆನು. (ಎಂದು "ಶುಕ್ರಮಹರ್ದಶೆ"ವೆಂಬ ಸುಕೃತವಿತ್ತು ನಿಂತನು. "ಶುಕ್ರಮಹರ್ದಶೆ"ಯಿದ್ದುದರಿಂದಲೇ ಎಲ್ಲರೂ ಇಂತಹ "ಗುರುಭೋಜನ, ಗುರುದಕ್ಷಿಣೆ"ಯ ಸೌಭಾಗ್ಯವನ್ನು ಪಡೆದರು ಎಂದು ಜನ ಹೇಳಿದುದರಿಂದ ಕೀರ್ತಿಯಲ್ಲಿ ಅಗ್ರಸ್ಥಾನವು ನನಗೇ ಲಭಿಸಿತೆಂದು ಹಿಗ್ಗಿದನು. ಮತ್ತು ತನ್ನ ದ್ವಿತೀಯರೂಪವಾದ "ಕವಿ" ಎಂಬ ರೂಪದಿಂದ ಶ್ರೀ|| ಮ|| ಶಾ|| ಪ್ರ|| ನಿರತರಾದ ಶ್ರೀಪಾದಪುತ್ರ ರಾಜಾ ಗುರುರಾಜಾಚಾರ್ಯರಲ್ಲಿ ಸನ್ನಿಹಿತನಾಗಿ ಅವರ "ಕವಿತಿಲಕ" ಎಂಬ ಬಿರುದನ್ನು ಸಾರ್ಥಕಗೊಳಿಸಿದನು.)

**ಶನಿ :**— ನಾನು ಉತ್ಸವದಲ್ಲಿ ಈ ರೂಪದಿಂದ ಪ್ರವೇಶಿಸುವುದುಚಿತವಲ್ಲ ! ನನ್ನ ದ್ವಿತೀಯ "ಮಂದ" ರೂಪದಿಂದ ಉತ್ಸವಕ್ಕೆ ನೆರೆದಿರುವ ಭಕ್ತಜನರ ಗಮನದಲ್ಲಿಯೂ ಶ್ರಮ ಪರಿಹಾರಕ್ಕಾಗಿ ಬೀಸುತ್ತಿರುವ ಮಾರುತನಲ್ಲಿಯೂ ವಸ್ತ್ರಾಲಂಕಾರವಿಭೂಷಿತರಾದ ಯೋಷಾಭೂಷಾಮಣಿಗಳ ಹಾಸದಲ್ಲಿಯೂ ಸೇರುವೆನು.

ಈ ರೀತಿಯಾಗಿ ಸಕಲ ದೇವತೆಗಳೂ ಸ್ವ ಸ್ವ ಯೋಗ್ಯ ಸ್ಥಳಗಳಲ್ಲಿ ಸೇರಿ ಉತ್ಸವವನ್ನು ಅಭೂತಪೂರ್ವ ತೇಜೋವಂತವಾಗಿ ಮಾಡಿರಲು, ಜನರು "ಭಕ್ತಿ" ಎಂಬ ರಜ್ಜುಗಳನ್ನು ಸ್ವೀಕರಿಸಿ ರಥೋತ್ಸವವನ್ನು ಸಾಂಗಗೊಳಿಸಿದರು. ಆಗ್ಗೆ ವಿಮಾನಾರೂಢರಾದ "ದೇವ, ಗಂಧರ್ವ, ಕಿನ್ನರ, ಕಿಂಪುರುಷರೇ"

ಮೊದಲಾದವರು ತಮ್ಮತಮ್ಮ ವನಿತಾಜನ ವೈಭವದಿಂದೊಡಗೂಡಿ ಪಾರಿಜಾತ ಪುಷ್ಪವೃಷ್ಟಿಯನ್ನು ಶ್ರೀಮದ್ರಾಘವೇಂದ್ರ ಯತಿವರೇಣ್ಯರ ಮೇಲೆ ಕರೆದರು. ಮಿಳಿತ ಜನರು ಶ್ರೀ ರಾಯರಿಂದ ಅಭಿಲಷಿತಾರ್ಥಗಳನ್ನು ಪಡೆದರು. ಪ್ರೇಕ್ಷಕರು ಕದಳೀ, ರಂಭಾ, ಖರ್ಜೂರಾದಿ ಫಲಗಳನ್ನು ರಥೋಪರಿ ಎಸೆದರು. ಹರ್ಷಸೂಚಕ ಭೇರೀ, ಡಕ್ಕಾ, ರಾಹುಕೇತು ಮೊದಲಾದ ಮಂಗಳವಾದ್ಯಗಳೂ, ಕರತಾಲ ಧ್ವನಿಗಳೂ ಮೊಳಗಿ ಗಗನಮಾರ್ಗದಲ್ಲೆಲ್ಲಾ ವ್ಯಾಪಿಸಿತು.

ಸುರಸುಂದರೀಸಂದೋಹ ಕರಕಮಲವಿಗಳಿತ ಮಂದಾರ ಪುಷ್ಪವೃಷ್ಟಿಯನ್ನು ಶ್ರೀ ರಮಾವಲ್ಲಭನು ನಾಲ್ಕು ರೂಪಗಳಿಂದಲೂ ಸ್ವೀಕರಿಸಿ ಶ್ರೀಮದ್ವಾಯುದೇವರ ಹಸ್ತದಲ್ಲಿರಿಸಿ, ಅವರಿಂದ ಶ್ರೀ ಮಂತ್ರಾಲಯ ಪ್ರಭುಗಳವರಿಗೆ ಅಭಿಷೇಕ ಮಾಡಿಸಿ ಆನಂದಭರಿತನಾದ ಪರಮೋತ್ಸವವನ್ನು ನೋಡುವ ಭಾಗ್ಯವು ಲಭಿಸಿದುದಕೆ ಶ್ರೀಮತ್ಸುಯಮೀಂದ್ರ ಶ್ರೀಪಾದಂಗಳವರ ಕೃಪಾ ಛತ್ರ ಛಾಯಾಶ್ರಿತನಾದ ಹರಿಪುರಿಯ ರಾಯಸಂ, ತಿರುಮಲರಾಯ ಕವಿಯು ಸೌಭಾಗ್ಯ ಸಂಪನ್ನನೇ ಸರಿ!

॥ ಇತ್ಯಶೇಷಮಹಿ ಮಂಗಳಂ ॥

**ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ ।**
**ತಥಾಪಿ ಯತ್ಪ್ರಸಾದೇನ ಮುಕುಂದ ಶಯನಾಯತೇ ॥**



॥ ಶ್ರೀಃ ॥

# ಶ್ರೀ ಮಂತ್ರಾಲಯಕ್ಷೇತ್ರದಲ್ಲಿ ಮೈಸೂರು ಶ್ರೀಮನ್ಮಹಾರಾಜರವರು


## ಶಿರೋಮಣಿ, ರಾಜಾ ಎಸ್. ಗುರುರಾಜಾಚಾರ್ಯಃ

**ನಂಜನಗೂಡು.**




ಶ್ರೀ ಮಂತ್ರಾಲಯವು ನಮ್ಮ ಭರತಖಂಡದಲ್ಲಿ ಬಹಳ ಪ್ರಖ್ಯಾತವಾದ ಕ್ಷೇತ್ರವೆಂಬುದು ಸರ್ವರಿಗೂ ವಿದಿತವಾದ ವಿಷಯ. ಈ ಕ್ಷೇತ್ರವು ಮದರಾಸು ಪ್ರಾಂತ್ಯದಲ್ಲಿ ಬಳ್ಳಾರಿ ಜಿಲ್ಲಾ ಆದವಾನಿ ತಾಲ್ಲೂಕಿಗೆ ಸೇರಿದುದು. ಮದ್ರಾಸ್, ಬೊಂಬಾಯಿ ಮಾರ್ಗದಲ್ಲಿರುವ ತುಂಗಭದ್ರಾ ರೈಲ್ವೆ ನಿಲ್ದಾಣದಿಂದ ಒಂಭತ್ತು ಮೈಲಿ ದೂರದಲ್ಲಿದೆ. ಈ ಕ್ಷೇತ್ರದಲ್ಲಿ ತುಂಗಭದ್ರಾ ನದಿಯು ಹರಿಯುತ್ತಿದೆ. ನೈಸರ್ಗಿಕವಾದ ಸ್ನಾನ ಘಟ್ಟಗಳು ಅನೇಕ ವಿಸ್ತೀರ್ಣ ಹಾಸುಬಂಡೆಗಳಿಂದೊಡಗೂಡಿ ನೋಡಲು ಬಹಳ ಮನೋಹರವಾಗಿವೆ. ಇಲ್ಲಿಯ ಸ್ನಾನಘಟ್ಟಗಳಿಗೆ "ರಾಯರ ಬಂಡೆ", "ವಾದೀಂದ್ರರ ಬಂಡೆ", "ಈಶ್ವರ ಬಂಡೆ" ಮುಂತಾಗಿ ಹೆಸರು ಗಳಿವೆ. ನದಿಯ ಸಮೀಪದಲ್ಲಿಯೇ ಶ್ರೀ ಗುರುರಾಜರವರ ಭವ್ಯವಾದ ಆಲಯವು ಕಂಗೊಳಿಸುತ್ತಿದೆ. ಶ್ರೀ ಬೃಂದಾವನದ ಎದರುಭಾಗದಲ್ಲಿ ಶ್ರೀ ರಾಯರ ಸಾಕ್ಷಾತ್ ಶಿಷ್ಯರಾದ ಶ್ರೀ ಯೋಗೀಂದ್ರತೀರ್ಥ ಶ್ರೀಪಾದ ರವರಿಂದ ಪ್ರತಿಷ್ಠಿತವಾದ ಶ್ರೀ ವಾಯುದೇವರು ರಾರಾಜಿಸುತ್ತಿದ್ದಾರೆ. ಶ್ರೀ ವಾಯುದೇವರ ಗುಡಿಯಲ್ಲಿಯೇ ಶ್ರೀ ಪ್ರಹ್ಲಾದರಾಜರಿಂದ ಪ್ರತಿಷ್ಠಿತವಾದ ಶಿವಲಿಂಗವಿದೆ. ಶ್ರೀ ಗುರುರಾಜರವರ ಎಡಭಾಗದಲ್ಲಿ ಉಭಯ ವಂಶಾಬ್ಧಿಚಂದ್ರರಾದ ಶ್ರೀ ವಾದೀಂದ್ರ ಯತೀಂದ್ರರ ಸುಂದರ ಬೃಂದಾವನವಿದೆ. ಮಹಾಪ್ರಾಕಾರದ ಹೊರ ಭಾಗದಲ್ಲಿ ಶ್ರೀ ಗುರುರಾಜರವರ ಪೀಠದಲ್ಲಿ ವಿರಾಜಿಸಿ ಪ್ರಖ್ಯಾತರಾದ ಶ್ರೀ ಸುಧರ್ಮೇಂದ್ರತೀರ್ಥರವರ ಮತ್ತು ಶ್ರೀ ಸುವ್ರತೀಂದ್ರತೀರ್ಥ ಶ್ರೀಪಾದರವರ ಬೃಂದಾವನಗಳು ಶೋಭಿಸುತ್ತಿವೆ. ಮಹಾದ್ವಾರದ ಹೊರ ಭಾಗದಲ್ಲಿ ಶ್ರೀ ಪ್ರಹ್ಲಾದರಾಜರ ಕುಲದೇವತೆಯೂ ಗ್ರಾಮದೇವತೆಯೂ ಆದ ಶ್ರೀ ಮಂತ್ರಾಲಯಾಂಬಿಕೆಯು ತನ್ನ ಭಕ್ತಶಿರೋಮಣಿಗಳಾದ ಪ್ರಹ್ಲಾದಾವತಾರರಾದ ಶ್ರೀ ಗುರುರಾಜರ ದೈವೀಸಂಪತ್ತನ್ನು ರಕ್ಷಿಸುತ್ತಾ ದುಷ್ಟಶಕ್ತಿಗಳಿಗೆ ಪ್ರತ್ಯಕ್ಷಸದೃಶಳಾಗಿ ಭಕ್ತನ ಭಕ್ತರಿಗೆ ಸ್ವಾಗತ ಕೋರುತ್ತಿರುವಳೋ ಎಂಬಂತೆ ವಿರಾಜಿಸು ತ್ತಿದ್ದಾಳೆ. ಗ್ರಾಮದ ಒಳಗೆ ಶ್ರೀಮಠದಲ್ಲಿ ಶ್ರೀ ಗುರುರಾಜರವರಿಂದ ಪ್ರತಿಷ್ಠಿತವಾದ ಶ್ರೀ ವೆಂಕಟೇಶ್ವರ ದೇವರ ಮಂದಿರವಿದೆ. ಯಾತ್ರಾರ್ಥಿಗಳಾಗಿ ಬರುವ ಭಕ್ತಜನರ ಸೌಕರ್ಯಾರ್ಥವಾಗಿ ಶ್ರೀಮಠದಿಂದ ನಿರ್ಮಿತ ವಾಗಿರುವ ಛತ್ರವಿದೆ. ವಸತಿಸೌಕರ್ಯವು ಉತ್ತಮವಾಗಿದೆ ಭಕ್ತಾದಿಗಳಿಗೆ ಶ್ರೀಮಠದಲ್ಲೇ ಭೋಜನಾದಿ ಗಳಿಗೆ ಅನುಕೂಲವಿದೆ. ಶ್ರೀ ಗುರುರಾಜರ ಆರಾಧನಾಮಹೋತ್ಸವ ಕಾಲದಲ್ಲಿ ಬರುವ ಸಹಸ್ರಾರು ಜನರಿಗೆ ವಸತಿಗನುಕೂಲವಾದ ಅನೇಕ ಶಿಲಾಮಂಟಪಗಳನ್ನು ಮಠದವರು ನಿರ್ಮಿಸಿದ್ದಾರೆ. ಏಕಕಾಲದಲ್ಲಿ ಸಾವಿರಾರು ಜನ ಭೋಜನಮಾಡಲು ಅನುಕೂಲವಿರುವಂತೆ ದೊಡ್ಡ ಭೋಜನಶಾಲೆಯು ನಿರ್ಮಿತವಾಗು ತ್ತಿದೆ. ಈ ಕ್ಷೇತ್ರವು ಶ್ರೀಮಠಕ್ಕೆ ಶ್ರೋತ್ರಿಯಂ ಗ್ರಾಮವಾಗಿದೆ. ಇಲ್ಲಿ ಶ್ರೀಮದ್ರಾಘವೇಂದ್ರಗುರು ಸಾರ್ವಭೌಮರವರು ಸಶರೀರರಾಗಿ ಬೃಂದಾವನ ಪ್ರವೇಶಮಾಡಿ ಸಂಸಾರದಲ್ಲಿ ಮಹಾಮಹಾ ವ್ಯಾಧಿ ಮತ್ತು ದುಃಖಪೀಡಿತರಾದ ಸಜ್ಜನರನ್ನುದ್ಧರಿಸುತ್ತಾ ಲೋಕೋದ್ಧಾರಾರ್ಥವಾಗಿ ವಿರಾಜಮಾನರಾಗಿದ್ದಾರೆ. ಭಕ್ತರ ಮನೋಭೀಷ್ಟಗಳನ್ನು ಪೂರೈಸುವುದರಲ್ಲಿ ಶ್ರೀ ಗುರುರಾಜರವರು ಕಾಮಧೇನು, ಕಲ್ಪವೃಕ್ಷಸದೃಶರಾಗಿದ್ದಾರೆ. ಕ್ಷೇತ್ರಪದ್ಧತಿಗೆ ಮತ್ತು ಶ್ರೀಮಠದ ಸಾಂಪ್ರದಾಯಗಳಿಗೆ ವ್ಯತ್ಯಯ ಬರದಂತೆ ನಡೆದು ಜಾತಿಮತಭೇದ

ವಿಲ್ಲದೆ ಲಕ್ಷಾಂತರ ಹಿಂದೂಜನರು ಅದ್ಯಾಪಿ ಶ್ರೀ ಗುರುರಾಜರಲ್ಲಿ ನಿಷ್ಕಳಂಕವಾದ ಭಕ್ತಿಯಿಂದ ಸೇವೆಮಾಡಿ ವಿಜ್ಞಾನ ವೈದ್ಯಶಾಸ್ತ್ರಗಳೇ ಮೊದಲಾದ ಆಧುನಿಕರೀತಿಯಿಂದ ಗುಣಹೊಂದಲು ಸಾಧ್ಯವಿಲ್ಲದ ಮಹಾವ್ಯಾಧಿಗಳಿಂದ ಮುಕ್ತರಾಗಿ ತಂತಮ್ಮ ಮನೋಭೀಷ್ಟಗಳನ್ನು ಹೊಂದುತ್ತಿರುವುದು ಜಗಜ್ಜನಿತವಾಗಿದೆ. ಈ ಕ್ಷೇತ್ರದ ಇತಿಹಾಸವು ಸಾಮಾನ್ಯವಾಗಿ ಹೆಚ್ಚು ಜನರಿಗೆ ತಿಳಿಯದಾದಕಾರಣ ಅದನ್ನಿಲ್ಲಿ ಉಲ್ಲೇಖಿಸುವುದು ಅಪ್ರಕೃತವಾಗಲಾರದೆಂದು ಭಾವಿಸುತ್ತೇನೆ.

ಪೂರ್ವದಲ್ಲಿ ಹಿರಣ್ಯಕಶಿಪುವಿನ ಸಂಹಾರಾನಂತರ ಶ್ರೀ ನೃಸಿಂಹರೂಪಿಯಾದ ಶ್ರೀಮನ್ನಾರಾಯಣನು ತನ್ನ ಪ್ರಿಯಭಕ್ತನಾದ ಪ್ರಹ್ಲಾದರಾಜನನ್ನು ಕುರಿತು ಇಷ್ಟವಾದ ವರಗಳನ್ನು ಬೇಡು ಅನುಗ್ರಹಿಸುವೆನೆಂದು ಅಪ್ಪಣೆಮಾಡಲು ಭಕ್ತಾಗ್ರಣಿಯಾದ ಪ್ರಹ್ಲಾದರಾಜನು "ದೇವ! ಈ ದೇಹವು ಶಾಶ್ವತವಲ್ಲ, ಆಶೆಗೆ ಪಾರವಿಲ್ಲ, ಐಹಿಕಸುಖವು ದುಃಖಕ್ಕೆ ಕಾರಣವಾದುದರಿಂದ ನನಗೆ ಈ ರಾಜ್ಯಕೋಶಾದಿಗಳೂ ಬೇಡ! ಯಾವಾಗಲೂ ಆನಂದಪ್ರದವಾದ ನಿನ್ನ ಸುಂದರ ಚರಣಕಮಲಗಳ ಸಾಮೀಪ್ಯವನ್ನು ಕೊಟ್ಟು ಕಾಪಾಡು" ಎಂದು ಪ್ರಾರ್ಥಿಸಲು; ಭಕ್ತವತ್ಸಲನಾದ ಶ್ರೀಹರಿಯು ಭಕ್ತ, ಪ್ರಹ್ಲಾದ! ಪುಣ್ಯಗಳಲ್ಲಿ ಇಷ್ಟ ಪುಣ್ಯ, ಅನಿಷ್ಟ ಪುಣ್ಯವೆಂದು ಎರಡು ಬಗೆಯಿದೆ. ನೀನು ಈಗ ಅಪೇಕ್ಷಿಸುತ್ತಿರುವ ಮೋಕ್ಷವನ್ನು ಹೊಂದಲು ಬೇಕಾದ ಇಷ್ಟ ಪುಣ್ಯಕ್ಕೂ ಅಧಿಕವಾದ ಅನಿಷ್ಟಪುಣ್ಯವು ರಾಶಿಯಾಗಿ ಬಿದ್ದಿದೆ. ಒಬ್ಬ ಜೀವಿ ತನ್ನ ಯೋಗ್ಯತೆಗೆ ತಕ್ಕ ಪುಣ್ಯವನ್ನು ಸಂಪಾದಿಸಿದರೆ ಮಾತ್ರ ಮೋಕ್ಷವು ಲಭಿಸುವುದು. ನೀನಾದರೋ ಇಷ್ಟಪುಣ್ಯಕ್ಕೂ ಮಿಗಿಲಾದ ಅನಿಷ್ಟಪುಣ್ಯವನ್ನು ಸಾಧನಬಲದಿಂದ ಸಂಪಾದಿಸಿರುವೆ. ಅನಿಷ್ಟಪುಣ್ಯವನ್ನು ಕಳೆದುಕೊಂಡ ವಿನಃ ಮೋಕ್ಷವು ಲಭಿಸಲಾರದು. ಆದುದರಿಂದ ನೀನು ಯಾವಾಗಲೂ ನನ್ನನ್ನೇ ಧ್ಯಾನಿಸುತ್ತಾ ಅನೇಕ ಸಹಸ್ರವರ್ಷ ರಾಜ್ಯಭಾರವನ್ನು ನಿರ್ವಹಿಸಿ ನಿನ್ನ ಅವತಾರಗಳಲ್ಲಿ ನನ್ನನ್ನೇ ಉಪಾಸನೆ ಮಾಡುತ್ತಿದ್ದು ಕೊನೆಯ ಯುಗವಾದ ಕಲಿಯುಗದಲ್ಲಿ ನಿನ್ನ ಕೊನೆಯ ಅವತಾರದ ಕೊನೆಯ ಆಶ್ರಮದಲ್ಲಿ ನಿನ್ನ ಅನಿಷ್ಟ ಪುಣ್ಯರಾಶಿಯಿಂದ ಸಂಸಾರದಲ್ಲಿ ದುಃಖಿತರಾದ ಸಜ್ಜನರುಗಳ ಪಾಪರಾಶಿಯನ್ನು ಕಳೆದು ಅವರವರ ಮನೋಭೀಷ್ಟಗಳನ್ನು ಕೊಡುತ್ತಾ ನಿನ್ನ ಅನಿಷ್ಟಪುಣ್ಯವನ್ನು ನಿವೃತ್ತಿಮಾಡಿಕೊಂಡು ನನ್ನ ಪಾದಸಾಮೀಪ್ಯವನ್ನು ಹೊಂದುವಂಥವನಾಗುತ್ತೀಯೇ ಎಂಬುದಾಗಿ "ಯಚ್ಛಾಂತಿಮೇಚಾಯೇಮೇ" ಎಂಬ ವಾಕ್ಯದಿಂದ ಅಪ್ಪಣೆಕೊಡಿಸಿ ಪ್ರಹ್ಲಾದರ ತಲೆಯಮೇಲೆ ವರದಹಸ್ತವನ್ನಿಟ್ಟು "ಮದ್ಭಕ್ತಾಸ್ತ್ವಾಮನುವ್ರತಾಃ" ನಿನ್ನನ್ನು ಯಾರು ಅನುಸರಿಸುತ್ತಾರೋ ಅವರೇ ನನ್ನ ಭಕ್ತರು. ಅಂತಹ ಭಕ್ತರುಗಳ ನಾಯಕನೆಂದು ನೀನು ಪ್ರಖ್ಯಾತನಾಗುತ್ತೀಯೇ ಎಂದು ಅಪ್ಪಣೆಕೊಡಿಸಿ ಅದೃಶ್ಯನಾದನು. ಶ್ರೀಹರಿಯ ಅಜ್ಞೆಯಂತೆ ಶ್ರೀ ಪ್ರಹ್ಲಾದರಾಜನು ಈ ಪ್ರದೇಶದಲ್ಲಿಯೇ ಅನೇಕಕಾಲ ರಾಜ್ಯಭಾರ ಮಾಡುತ್ತಿದ್ದು ಈಗ ಶ್ರೀ ಗುರುರಾಜರವರ ಬೃಂದಾವನವಿರುವ ಸ್ಥಳದಲ್ಲೇ ಅನೇಕ ಯಜ್ಞಯಾಗಾದಿಗಳನ್ನು ಶ್ರೀಮನ್ನಾರಾಯಣನ ಪ್ರೀತ್ಯರ್ಥವಾಗಿ ಮಾಡುತ್ತಿದ್ದನು. ಅಂತಹ ಯಾವ ಭಕ್ತಾಗ್ರಣಿಯಾದ ಶ್ರೀ ಪ್ರಹ್ಲಾದನು ಮಾಡಿದ ಯಜ್ಞಗಳಿಂದ ಈ ಕ್ಷೇತ್ರವು ಪರಮಪಾವನವಾಗಿದೆ.

ದ್ವಾಪರಯುಗದಲ್ಲಿ ಈ ಪ್ರದೇಶದಲ್ಲಿ ಅನುಸಾಲ್ವಮಹಾರಾಜನು ರಾಜ್ಯಭಾರ ಮಾಡುತ್ತಿರುವಾಗ್ಯೆ ರಾಜಸೂಯಾಗಾರ್ಥವಾಗಿ ಪಾಂಡವರಿಂದ ಬಿಡಲ್ಪಟ್ಟ ಅಶ್ವವನ್ನು ಅನುಸಾಲ್ವನು ಇದೇ ಪ್ರದೇಶದಲ್ಲಿಯೇ ಬಂಧಿಸಿದನಾದಕಾರಣ ಅರ್ಜುನನು ಕೋಪಾವಿಷ್ಟನಾಗಿ ಅನುಸಾಲ್ವನನ್ನು ಯುದ್ಧಕ್ಕೆ ಆಹ್ವಾನಿಸಿದನು. ಆಗ ಅರ್ಜುನ ಅನುಸಾಲ್ವರಿಗೆ ಈ ಸ್ಥಳದಲ್ಲಿ ಘೋರವಾದ ಕದನವು ನಡೆದು ಅರ್ಜುನನು ಪರಾಜಿತನಾಗಿ ಅತಿ ದುಃಖದಿಂದ ಶ್ರೀಕೃಷ್ಣಪರಮಾತ್ಮನನ್ನು ಧ್ಯಾನಿಸಲು ಭಗವಾನ್ ಶ್ರೀಕೃಷ್ಣನು "ಮಮಪ್ರಾಣಾಹಿ ಪಾಂಡವಾಃ" ಎಂಬ ತನ್ನ ಉಕ್ತಿಯನ್ನು ಜಗತ್ತಿಗೆ ತೋರಿಸಲೋಸುಗ ತಕ್ಷಣವೇ ಗರುಡಾರೂಢನಾಗಿ ಇದೇ ಸ್ಥಳದಲ್ಲಿ ಪ್ರತ್ಯಕ್ಷನಾಗಿ ಅರ್ಜುನನ್ನು ಸಂತೈಸಿ ಪಾರ್ಥ! ತ್ರಿಲೋಕವಿಜಯಿಯಾದ ನಿನ್ನನ್ನು ಈ ಅನುಸಾಲ್ವನು ತನ್ನ ಪರಾಕ್ರಮದಿಂದ ಜಯಿಸಿದನೆಂದು ದುಃಖಿಸಬೇಡ. ಈ ಅನುಸಾಲ್ವನು ನಿಂತು

ಯುದ್ಧಮಾಡಿದ ಸ್ಥಳವು ಪರಮಪವಿತ್ರವೂ ಆದದ್ದು. ಹಿಂದೆ ಪ್ರಹ್ಲಾದರಾಜನು ಈ ಸ್ಥಳದಲ್ಲಿಯೇ ಅನೇಕ ಯಾಗಾದಿಗಳನ್ನು ಮಾಡಿರುವುದರಿಂದ ಈ ಸ್ಥಳವು ಮಹಾಮಹಿಮೋಪೇತವಾಗಿದೆ. ಅದರ ಬಲದಿಂದ ಅವನಿಗೆ ಜಯವು ಲಭಿಸಿದೆ. ಇದಕ್ಕಾಗಿ ಚಿಂತಿಸದಿರು ಎಂದು ಹೇಳಿ ಕ್ಷಣಮಾತ್ರದಲ್ಲಿ ತನ್ನ ಮಾಯೆಯಿಂದ ಅನುಸಾಲ್ವನಿದ್ದ ಸ್ಥಳದಲ್ಲಿ ಅರ್ಜುನನ ರಥವನ್ನು ನಿಲ್ಲಿಸಿ ಪುನಃ ಯುದ್ಧಮಾಡುವಂತೆ ಅಪ್ಪಣೆಮಾಡಿದನು. ಆಗ ಅನುಸಾಲ್ವ ಅರ್ಜುನರಿಗೆ ಪುನಃ ಭಯಂಕರ ಯುದ್ಧವಾಗಿ ಅನುಸಾಲ್ವನು ಪರಾಜಿತನಾದನು. ಇದರಿಂದ ಈ ಕ್ಷೇತ್ರದ ಮಹತ್ವವೆಷ್ಟೆಂಬುದನ್ನು ತಿಳಿಯಬಹುದಾಗಿದೆ. ಅಲ್ಲದೇ ಈ ಸ್ಥಳವು ಶ್ರೀರಾಮ ಚಂದ್ರನ ಮತ್ತು ಶ್ರೀಕೃಷ್ಣನ ಪಾದಸ್ಪರ್ಶನದಿಂದ ಪುನೀತವಾಗಿದೆ.

ಕಲಿಯುಗದಲ್ಲಿ ಈ ಪ್ರದೇಶವನ್ನು ಅನೇಕ ರಾಜಾಧಿರಾಜರು ಪಾಲಿಸಿದ್ದಾರೆ. ಕರ್ಣಾಟಸಾಮ್ರಾಜ್ಯವು ಸ್ಥಾಪಿತವಾದಮೇಲೆ ಈ ಕ್ಷೇತ್ರವು ವಿಜಯನಗರದ ರಾಜರ ಆಳ್ವಿಕೆಗೆ ಸೇರಿತು. ಈ ಕ್ಷೇತ್ರದ ಮಹಿಮೆ ಯನ್ನರಿತ ಮಹಾತಪಸ್ವಿಗಳೂ, ಸಕಲ ಶಾಸ್ತ್ರಪಾರಂಗತರೂ, ಶೈವಾದ್ವೈತವಾದವನ್ನು ಗಂಗಾನದಿಯಿಂದ ಹಿಮಾಲಯ ಪರ್ಯಂತನಾಗಿ ನಿರಾಕರಿಸಿ ದ್ವೈತಮತದ ವಿಜಯದುಂದುಭಿಯನ್ನು ಮೊಳಗಿಸಿದವರೂ, ಶ್ರೀಮನ್ಮಧ್ವಾಚಾರ್ಯರವರ ಮಹಾಸಂಸ್ಥಾನಾಧಿಪತಿಗಳೂ ಜಗದ್ಗುರುಗಳೂ ಆದ ಶ್ರೀ ವಿಬುಧೇಂದ್ರತೀರ್ಥ ಶ್ರೀಪಾದಂಗಳವರು ವಿಜಯನಗರದ ಅರಸರಿಂದ ಈ ಕ್ಷೇತ್ರವನ್ನು ಜಹಗೀರನ್ನಾಗಿ ಸಂಪಾದಿಸಿ ಬಹುಕಾಲ ಇಲ್ಲಿ ತಪಸ್ಸನ್ನಾಚರಿಸುತ್ತಿದ್ದರು. ಈ ಕ್ಷೇತ್ರವು ಸಕಲ ಮಂತ್ರಸಿದ್ಧಿಪ್ರದವಾದುದರಿಂದಲೇ ಮಂತ್ರಾಲಯ ವೆಂಬ ಅನ್ವರ್ಥಕನಾಮದಿಂದ ವಿರಾಜಿಸುತ್ತಿದೆ. ಸಕಲ ಮಂತ್ರಾಭಿಮಾನಿ ದೇವತೆಗಳೂ ಇಲ್ಲಿ ಯಾವಾಗಲೂ ಸನ್ನಿಹಿತರಾಗಿರುತ್ತಾರೆ. ಇರಲಿ.

ಕೆಲಕಾಲ ಗತಿಸಿದನಂತರ ವಿಜಯನಗರದ ಸಾಮ್ರಾಜ್ಯವು ನಾಶವಾಯಿತು. ಆಗ ಈ ಪ್ರದೇಶವು ಯವನರಾಜರ ಸ್ವಾಧೀನವಾಯಿತು ಆಗೊಂದುಬಾರಿ ಈ ಗ್ರಾಮವು ಮಠದ ಕೈಬಿಟ್ಟುಹೋಯಿತು.

ಶ್ರೀಮದ್ರಾಜಾಧಿರಾಜ ಗುರುಸಾರ್ವಭೌಮರಾದ ಶ್ರೀ ರಾಘವೇಂದ್ರಗುರುವರೇಣ್ಯರು ತಾವು ಪ್ರಹ್ಲಾದ ರಾಗಿ ಅವತರಿಸಿದ್ದಾಗ ಯಜ್ಞಮಾಡಿದ ಈ ಸ್ಥಳದಲ್ಲೇ ಶ್ರೀಮನ್ನಾರಾಯಣನು ಹಿಂದೆ ಅಪ್ಪಣೆಕೊಡಿಸಿದ್ದಂತೆ ಕಡೆಯ ಯುಗವಾದ ಕಲಿಯುಗದಲ್ಲಿ ಕೊನೆಯ ಅವತಾರದ ಅಂತ್ಯಾಶ್ರಮವಾದ ಶ್ರೀ ರಾಘವೇಂದ್ರ ಯತಿ ರೂಪದಿಂದ ಈ ಸ್ಥಳದಲ್ಲಿ ಸಶರೀರರಾಗಿ ಬೃಂದಾವನ ಪ್ರವೇಶಮಾಡಿ ಇಲ್ಲಿಗೆ ಬಂದು ತಮ್ಮನ್ನು ಭಕ್ತಿಯಿಂದ ಸೇವಿಸುವ ಭಕ್ತಜನರ ಪಾಪಗಳನ್ನು ತಮ್ಮ ಅನಿಷ್ಟಪುಣ್ಯದಿಂದ ನಿವಾರಣಮಾಡಿ ಅವರವರ ಅಭೀಪ್ಸಿತ ಗಳನ್ನು ಪೂರೈಸುತ್ತಾ ಕೊನೆಗೆ ಶ್ರೀಹರಿಯ ಸಾಮೀಪ್ಯವನ್ನು ಸೇರಬೇಕೆಂದು ಸಂಕಲ್ಪಿಸಿ ಆದವಾನಿಯಲ್ಲಿದ್ದ ಯವನರಾಜ ಸಿದ್ದೀ ಮಸೂದ್‌ಖಾನ್ ಸಾಹೇಬನಿಗೆ ತಮ್ಮ ತಪಃಪ್ರಭಾವ ಮತ್ತು ಮಹಿಮೆಯನ್ನು ತೋರಿಸಿ ನಿಜಶಿಷ್ಯನೂ, ಭಕ್ತನೂ ಆದ ಸರ್ ದೇಶಾಯಿ ದಿವಾನ್ ವೆಂಕಣ್ಣನ ಮೂಲಕವಾಗಿ ಈ ಗ್ರಾಮವನ್ನು ಪುನಃ ಸಂಪಾದಿಸಿದರು. ಕೆಲಕಾಲ ಗತಿಸಿದ ನಂತರ ಶ್ರೀ ಗುರುರಾಜರವರು ಭೂಲೋಕದಲ್ಲಿ ತಾವು ಎಲ್ಲರ ದೃಗ್ಗೋಚರರಾಗಿರಬೇಕಾದ ಕಾಲವು ಮುಗಿಯಿತೆಂದರಿತು ತಾವು ಪ್ರಹ್ಲಾದರಾಜರಾಗಿದ್ದಾಗ ಮಾಡಿದ ಯಜ್ಞಕುಂಡದ ಮೇಲ್ಭಾಗದಲ್ಲಿ ಬೃಂದಾವನವನ್ನು ನಿರ್ಮಿಸಿ ಶ್ರೀ ಯೋಗೀಂದ್ರತೀರ್ಥ ಶ್ರೀಪಾದಂಗಳವರಿಗೆ ಮಹಾಸಂಸ್ಥಾನಾಧಿಪತ್ಯವನ್ನು ವಹಿಸಿಕೊಟ್ಟು ಬೃಂದಾವನದಲ್ಲಿ ಎಲ್ಲರೂ ನೋಡುತ್ತಿರುವಂತೆಯೇ ಸಶರೀರ ರಾಗಿ ಪ್ರವೇಶಮಾಡಿದರು ಮತ್ತು ಅದ್ಯಾಪಿ ಬೃಂದಾವನದಲ್ಲಿ ಸಶರೀರರಾಗಿದ್ದು ಭಕ್ತಜನರನ್ನುದ್ಧರಿಸು ತ್ತಿದ್ದಾರೆ. ಇಂತಹ ಮಹಾಮಹಿಮೆಯಿಂದ ರಾರಾಜಿಸುತ್ತಿರುವ ಈ ಕ್ಷೇತ್ರವು ಆಸ್ತಿಕನಾದ ಪ್ರತಿಯೊಬ್ಬ ಮಾನವನಿಂದಲೂ ಜನ್ಮದಲ್ಲಿ ಒಂದುಬಾರಿಯಾದರೂ ಪ್ರೇಕ್ಷಣೀಯವಾದುದು.

ಇಂತಹ ಮಹಾಕ್ಷೇತ್ರಕ್ಕೆ ಮೈಸೂರು ಪುರವರಾಧೀಶ ಕರ್ಣಾಟಕ ರತ್ನಸಿಂಹಾಸನಾಧೀಶ್ವರರಾದ

ಶ್ರೀರಾಘವೇಂದ್ರಗುರುಸಾರ್ವಭೌಮರವರ ಮಹಾಸನ್ನಿಧಾನಕ್ಕೆ ಬಿಜಯಮಾಡಿಸಿದರು. ಶ್ರೀಗುರುರಾಜರವರಿಗೆ ಮಂಗಳಾರತಿ ನಡೆದು ಸ್ವಸ್ತಿವಾಚನವಾದೊಡನೆ ಮಹಾಸ್ವಾಮಿಯವರ ದಿವ್ಯಹಸ್ತದಿಂದ ಶ್ರೀರಾಯರಿಗೆ ಮಂಗಳಾರತಿಯನ್ನು ಮಾಡಿಸಿ ಶ್ರೀಪಾದಂಗಳವರು ಮಹಾಪ್ರಭುಗಳವರಿಗೆ ಹಾರಾತುರಾಯಿ ಫಲಮಂತ್ರಾಕ್ಷತಾಶೇಷವಸ್ತ್ರಾದಿಗಳನ್ನೂ ಪೂಜಾರ್ಥವಾಗಿ ಶ್ರೀಗುರುರಾಜರವರ ಸುವರ್ಣ ಬೃಂದಾವನವನ್ನೂ ಧಾರಣಾರ್ಥವಾಗಿ ಸ್ವರ್ಣತುಳಸೀಮಣಿಯನ್ನೂ ಮತ್ತು ರತ್ನಖಚಿತಪದಕಸಹಿತವಾದ ಚಂದ್ರಹಾರವನ್ನೂ ಅನುಗ್ರಹಿಸಿದರು. ನಂತರ ಮಹಾಮಾತೋಶ್ರೀಯವರಾದ ಶ್ರೀಮದ್ಯುವರಾಣಿಯವರಿಗೂ ಶ್ರೀರಾಜಕುಮಾರಿಯವರುಗಳಿಗೂ ಫಲಮಂತ್ರಾಕ್ಷತೆಯನ್ನು ಅನುಗ್ರಹಿಸಿದರು. ಶ್ರೀಮನ್ಮಹಾಪ್ರಭುಗಳವರು ಶ್ರೀಗುರುರಾಜರವರ ಚರಿತ್ರೆ ಮತ್ತು ಮಹಿಮಾವಿಚಾರವಾಗಿ ಪ್ರಶ್ನೆಮಾಡಲು ಶ್ರೀ ಶ್ರೀಪಾದಂಗಳವರು ಸಂಕ್ಷೇಪವಾಗಿ ಶ್ರೀಗುರುರಾಜರ ಚರಿತ್ರೆಯನ್ನು ಈ ರೀತಿ ಅಪ್ಪಣೆಕೊಡಿಸಿದರು.

॥ ಶ್ರೀಃ ॥

ಮೂಕೋಪಿ ಯತ್ಪ್ರಸಾದೇನ ಮುಕುಂದಶಯನಾಯತೇ ।
ರಾಜರಾಜಾಯತೇ ರಿಕ್ತೋ ರಾಘವೇಂದ್ರಂ ತಮಾಶ್ರಯೆ ॥

ಪ್ರಭುಗಳವರೇ,

ನಮ್ಮ ಗುರುಸಾರ್ವಭೌಮರವರಾದ ಶ್ರೀರಾಘವೇಂದ್ರಸ್ವಾಮಿಗಳವರು ನಮ್ಮ ಸಂಸ್ಥಾನಾರೂಢರಾಗಿದ್ದ ಕಾಲದಾರಭ್ಯ ಅವರ ಪರಮಾನುಗ್ರಹಕ್ಕೆ ಪಾತ್ರರಾದ ನಮ್ಮ ಮೈಸೂರು ರತ್ನಸಿಂಹಾಸನಾಧಿಪತಿಗಳವರ ವಂಶದಲ್ಲಿ ಜನಿಸಿದ ತಾವು ಶ್ರೀಗುರುರಾಜರವರ ಪರಮಾನುಗ್ರಹಾಕಾಂಕ್ಷಿಗಳಾಗಿ ಅವರ ಸಂದರ್ಶನಾರ್ಥವಾಗಿ ಈ ದಿವಸ ಇಲ್ಲಿಗೆ ದಯಮಾಡಿರುವುದು ನಮಗೆ ಬಹಳ ಸಂತೋಷಕ್ಕೆ ಕಾರಣವಾಗಿರುತ್ತದೆ. ತಮ್ಮಲ್ಲಿ ಪೂರ್ಣಪರಮಾನುಗ್ರಹಮಾಡಲು ಇಲ್ಲಿಗೆ ಬರಮಾಡಿಕೊಂಡಿರುವ ಶ್ರೀಗುರುಸಾರ್ವಭೌಮರವರು ತಮಗೆ ನಮ್ಮ ಸಮಕ್ಷಮದಲ್ಲಿ ದರ್ಶನಕೊಡುವುದು ಮತ್ತೂ ಆನಂದದಾಯಕವಾಗಿರುತ್ತದೆ. ಈ ಸುಸಮಯದಲ್ಲಿ ನಮ್ಮ ಕರ್ತವ್ಯವಾಗಿ ಆವಶ್ಯಕವಾಗಿ ತಿಳಿಸತಕ್ಕ ವಿಷಯಗಳನ್ನು ಪ್ರಭುಗಳವರ ಚಿತ್ತಕ್ಕೆ ತರಲು ಅಪೇಕ್ಷಿಸುತ್ತೇವೆ

ಜಗಜ್ಜನ್ಮಾದಿ ಕಾರಣನೂ ಅನಂತಗುಣ ಪರಿಪೂರ್ಣನೂ ಸಕಲ ಇಷ್ಟಾರ್ಥಪ್ರದನೂ ಆದ ಶ್ರೀ ಮೂಲರಾಮಾಭಿನ್ನನಾದ ಶ್ರೀಹರಿಯ ಅನುಗ್ರಹವು ಸರ್ವಸಜ್ಜನರುಗಳಿಂದಲೂ ಅಪೇಕ್ಷಣೀಯವಾದದ್ದು. ಶ್ರೀಹರಿಯ ಅನುಗ್ರಹವು ಅವನ ಮಾಹಾತ್ಮ್ಯಜ್ಞಾನಪೂರ್ವಕವಾಗಿ ಅವನಲ್ಲಿ ಮಾಡತಕ್ಕ ಭಕ್ತಿಯಿಂದ ಲಭ್ಯವಾಗತಕ್ಕದ್ದಾದಕಾರಣ ಶ್ರೀಹರಿಯ ಮಾಹಾತ್ಮ್ಯಜ್ಞಾನವು ಸದ್ಗುರುಗಳವರ ಉಪದೇಶದಿಂದ ಉಂಟಾಗಿರುವುದರಿಂದ ಗುರುಗಳವರ ಪರಮಾನುಗ್ರಹಾರ್ಥವಾಗಿ ಅವರಲ್ಲಿ ಭಕ್ತಿಯು ಅತ್ಯಾವಶ್ಯಕವಾದ್ದರಿಂದ ಶ್ರೀಹರಿಯ ಅನುಗ್ರಹವನ್ನು ಮಾಡಿಸತಕ್ಕ ಶ್ರೀಮದಾಚಾರ್ಯರಾದಿಯಾಗಿ ಅನೇಕ ಗುರುವರೇಣ್ಯರುಗಳು ಇದ್ದಾಗ್ಯೂ ಶ್ರೀಬ್ರಹ್ಮದೇವರ ಕರಾರ್ಚಿತರಾದ ಶ್ರೀಮೂಲರಾಮದೇವರ ಪೂಜಾರ್ಥವಾಗಿಯೂ, ಜ್ಞಾನಕಾರ್ಯಕ್ಕಾಗಿ ಅವತರಿಸಿರುವ ಶ್ರೀವಾಯುದೇವರ ಸೇವಾರ್ಥವಾಗಿಯೂ, ಲೋಕಕಲ್ಯಾಣಕ್ಕಾಗಿಯೂ, ಶ್ರೀರಾಘವೇಂದ್ರಸ್ವಾಮಿಗಳವರೆಂಬ ಅಭಿಧಾನದಿಂದ ಅವತರಿಸಿದ ಶ್ರೀಗುರುಸಾರ್ವಭೌಮರವರ ಬೃಂದಾವನಸನ್ನಿಧಾನದಲ್ಲಿ ಮೇಲೆ ಹೇಳಿದ ಗುರುವರೇಣ್ಯರುಗಳು ಶ್ರೀಹರಿಯ ಆಜ್ಞಾನುಸಾರವಾಗಿ ಇದ್ದುಕೊಂಡು ಶ್ರೀಗುರುಸಾರ್ವಭೌಮರವರ ಮೂಲಕವಾಗಿ ಸಕಲ ಭಕ್ತರುಗಳ ಮನೋಭೀಷ್ಟವನ್ನು ಕೊಡಿಸುತ್ತಿರುವುದು, ಜಗತ್ಪ್ರಸಿದ್ಧವಾದ ವಿಷಯವಾಗಿದೆ. ಈರೀತಿಯಾಗಿ ಕಲಿಯುಗದ ಕಾಮಧೇನು, ಕಲ್ಪವೃಕ್ಷವೆಂದು ವಿಖ್ಯಾತರಾದ ಶ್ರೀಗುರುಸಾರ್ವಭೌಮರವರ ಸಂದರ್ಶನಾರ್ಥವಾಗಿ ದಯಮಾಡಿಸಿರುವ ಪ್ರಭುಗಳವರಿಗೆ ಶ್ರೀಗುರುರಾಜರವರಲ್ಲಿ ವಿಶೇಷ ಭಕ್ತಿಯುಂಟಾಗಿರುವದರಮೂಲಕ ಅವರ ಪೂರ್ಣಾನುಗ್ರಹಕ್ಕೆ ಪಾತ್ರರನ್ನಾಗಿ ಮಾಡಿಸಬೇಕೆಂಬ ಉತ್ಕಟೇಚ್ಛಾ ಉಳ್ಳ ನಾವು ಶ್ರೀಗುರುರಾಜರ ಮಹಿಮೆಗಳಲ್ಲಿ ಯತ್ಕಿಂಚಿನ್ಮಾಹಾತ್ಮ್ಯೆಯನ್ನು

ಪ್ರಭುಗಳವರಿಗೆ ತಿಳಿಸಬೇಕೆಂಬ ಕುತೂಹಲ ಉಳ್ಳವರಾಗಿದ್ದೇವೆ. ಆದರೆ, ಶ್ರೀಗುರುರಾಜರವರ ಸಮಕಾಲೀನರೂ ಅವರ ಅನುಗ್ರಹಕ್ಕೆ ಪಾತ್ರರೂ, ಅವರ ಮಹಿಮೆಗಳನ್ನು ತಿಳಿದವರೂ ಮತ್ತು ಶಿಷ್ಯರೂ ಆದ ಅಪ್ಪಣಾಚಾರ್ಯರಿಂದ ರಚಿಸಲ್ಪಟ್ಟ ಶ್ರೀಗುರು ಸ್ತೋತ್ರದಲ್ಲಿ ಶ್ರೀಗುರುಗಳವರ ಮಹಿಮೆಯು ಅಗಮ್ಯವಾದದ್ದೆಂದು ಸ್ಪಷ್ಟವಾಗಿ ಹೇಳಿರುವಾಗ ನಾವು ಶ್ರೀಗುರುಗಳ ಮಹಿಮೆಯನ್ನು ಹೇಳುತ್ತೇವೆಂದು ಉಪಕ್ರಮಿಸಿರುವುದು ಅತಿ ಸಾಹಸದ ಕಾರ್ಯವಾದಾಗ್ಯೂ ನಮ್ಮ ಗುರುಪರಂಪರೆಯಿಂದ ತಿಳಿದು ಬಂಧ ಮಹಿಮೆಗಳಲ್ಲಿ ಕೆಲವುಗಳನ್ನು ತಿಳಿಸುತ್ತೇವೆನ್ನುವುದು ಅಧಿಕೋಕ್ತಿಯಾಗಲಾರದೆಂದು ಭಾವಿಸುತ್ತೇವೆ.

ಶ್ರೀ ಗುರುಸಾರ್ವಭೌಮರವರ ಮಾಹಾತ್ಮ್ಯೆಯನ್ನು ತಿಳಿಸುವುದಕ್ಕೆ ಮೊದಲು ನಮ್ಮ ಆದಿಗುರುಗಳ ಮಹಿಮೆಯನ್ನು ತಿಳಿಸುವುದು ನಮ್ಮ ಆದ್ಯಕರ್ತವ್ಯವಾದುದರಿಂದ ಅದನ್ನು ಪ್ರಭುಗಳವರಿಗೆ ತಿಳಿಸಿ ನಂತರ ಶ್ರೀ ಗುರುರಾಜರ ಮಹಿಮೆಯನ್ನು ತಿಳಿಸುತ್ತೇವೆ. ಅನಾದಿಯಾಗಿ ನಡೆದು ಬಂದಿರುವ ದ್ವೈತಮತವು ಕಾಲಬಲದಿಂದ ಖಿಲವಾಗಿ ತತ್ವಜ್ಞಾನ ವಿಷಯದಲ್ಲಿ ಸಂದೇಹ ಉಂಟಾಗಿ ಸಂಕಟಪಡುತ್ತಿರುವ ಸಜ್ಜನರುಗಳಲ್ಲಿ ಕೃಪಾಪೂರ್ಣರಾದ ಬ್ರಹ್ಮಾದಿದೇವತೆಗಳ ಪ್ರಾರ್ಥನಾನುಸಾರ ಶ್ರೀಹರಿಯು, ಹಿಂದೆ ದುಷ್ಟನಿಗ್ರಹ ಶಿಷ್ಟಪಾಲನಾರ್ಥವಾಗಿ ಬಲಕಾರ್ಯಕ್ಕಾಗಿ ಶ್ರೀರಾಮರೂಪದಿಂದ ಅವತರಿಸಿದಕಾಲದಲ್ಲಿ ಹನುಮಂತನೆಂತಲೂ, ಶ್ರೀ ಕೃಷ್ಣರೂಪದಿಂದ ಅವತರಿಸಿದಕಾಲದಲ್ಲಿ ಭೀಮಸೇನನೆಂತಲೂ ಪ್ರಖ್ಯಾತರಾಗಿ ಶ್ರೀಹರಿಯಸೇವಾದಿಗಳಿಂದ ಅವನ ಮುಖ್ಯಾನುಗ್ರಹಕ್ಕೆ ಪಾತ್ರರಾದ ಶ್ರೀವಾಯುದೇವರೇ ಜ್ಞಾನಕಾರ್ಯಕ್ಕಾಗಿ ಅವತರಿಸಿದ ವೇದವ್ಯಾಸರೂಪಿಯಾದ ಶ್ರೀಹರಿಯ ಸೇವಾರ್ಥವಾಗಿ ಶ್ರೀಪರಮಾತ್ಮನ ಆಜ್ಞಾನುಸಾರವಾಗಿ ಭರತಖಂಡದಲ್ಲಿ ಉಡುಪಿ ಕ್ಷೇತ್ರಕ್ಕೆ ಸಮೀಪವಾದ ಪಾಜಕಕ್ಷೇತ್ರವೆಂಬ ಗ್ರಾಮದಲ್ಲಿ ಮಧ್ಯಗೇಹಭಟ್ಟರೆಂಬುವವರ ಪುತ್ರತ್ವೇನ ವಾಸುದೇವಾಚಾರ್ಯರೆಂಬ ನಾಮದಿಂದ ಅವತರಿಸಿ ತಮ್ಮ ಗುರುಗಳವರಾದ ಅಚ್ಯುತಪ್ರೇಕ್ಷಯತಿಗಳಲ್ಲಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ, ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರೆಂದು ಪ್ರಸಿದ್ಧರಾಗಿ ಬದರಿಕಾಶ್ರಮಕ್ಕೆ ಹೋಗಿ ಶ್ರೀವೇದವ್ಯಾಸದೇವರನ್ನು ನಮಸ್ಕಾರಾದಿಗಳಿಂದ ಸಂತೋಷಪಡಿಸಿ ಅವರ ಅನುಗ್ರಹಕ್ಕೆ ಪಾತ್ರರಾಗಿ ಅವರಿಂದ ಉಪದೇಶಹೊಂದಿ ಅವರ ಆಜ್ಞಾನುಸಾರವಾಗಿ ಅವರಿಂದ ರಚಿಸಲ್ಪಟ್ಟ ಬ್ರಹ್ಮಸೂತ್ರಗಳಿಗೆ ಅವರ ಅಭಿಪ್ರಾಯಾನುಸಾರವಾಗಿ ಭಾಷ್ಯಾದಿ ಗ್ರಂಥರಚನೆಮಾಡಿ ಖಿಲವಾಗಿದ್ದ ದ್ವೈತಮತವನ್ನು ಉದ್ಧಾರಮಾಡಿ ಶ್ರೀಮದ್ವೈಷ್ಣವ ಸಿದ್ಧಾಂತವನ್ನು ಸ್ಥಾಪಿಸಿ ತಾವು ಹಿಂದೆ ಹನುಮದ್ಭೀಮಸೇನಾವತಾರದಲ್ಲಿ ಅರ್ಚಿಸಲ್ಪಟ್ಟ ಬ್ರಹ್ಮಕರಾರ್ಚಿತ ಸೂರ್ಯವಂಶೋತ್ಪನ್ನ ಅಜ, ರಘು, ದಶರಥ ಶ್ರೀರಾಮಾದಿಗಳಿಂದ ಪೂಜಿಸಲ್ಪಟ್ಟದ್ದರಿಂದ ಶ್ರೀಮೂಲರಾಮನೆಂದು ಪ್ರಖ್ಯಾತಿಪಡೆದ, ನಂತರ ದ್ವಾಪರಯುಗದಲ್ಲಿ ಚಂದ್ರವಂಶಜರಾದ ಪಾಂಡವರಿಂದ ಪೂಜಿಸಲ್ಪಟ್ಟು ಗಜಪತಿಕೋಶದಲ್ಲಿದ್ದ **ಶ್ರೀ ಮೂಲರಾಮವಿಗ್ರಹ**ವನ್ನು ಮಧ್ವಾವತಾರದಲ್ಲಿಯೂ ಅರ್ಚಿಸಲು ಸ್ವಶಿಷ್ಯರಾದ ನರಹರಿತೀರ್ಥರಿಂದ ತರಮಾಡಿಕೊಂಡು, ತಾವು ಕೆಲವುಕಾಲ ಆರಾಧಿಸಿ, ಈ ವಿಗ್ರಹವು ತಮ್ಮ ರೂಪತ್ರಯದಿಂದಲೂ ಅರ್ಚಿಸಲ್ಪಟ್ಟಕಾರಣ ನಮ್ಮ ಸಂಸ್ಥಾನದ ಮೂಲಪೀಠದಲ್ಲಿಯೇ ಆರಾಧಿಸಲ್ಪಡಬೇಕೆಂದು ಬದರಿಕಾಶ್ರಮಕ್ಕೆ ಪುನಃ ತಾವು ಪ್ರಯಾಣಮಾಡುವಾಗ ಆಜ್ಞಾಪಿಸಿದ ದ್ವೈತಮತಸ್ಥಾಪಕರಾದ ಶ್ರೀಮನ್ ಮಧ್ವಾಚಾರ್ಯರೇ ನಮ್ಮ ಆದಿಗುರುಗಳವರು. ಇವರು ಮತದ ತತ್ವವನ್ನು ಶ್ರೀಗುರುರಾಜರವರು ಹಿಂದೆ ಶ್ರೀವ್ಯಾಸರಾಜಸ್ವಾಮಿಗಳವರಾಗಿ ಅವತರಿಸಿದಕಾಲದಲ್ಲಿ ಒಂದೇ ಶ್ಲೋಕದಲ್ಲಿ ನಿರೂಪಿಸಿರುತ್ತಾರೆ. ಆ ಶ್ಲೋಕಾಭಿಪ್ರಾಯವನ್ನು ಇಲ್ಲಿ ಅನುವಾದಮಾಡುತ್ತೇವೆ. ಹರಿಯೇ ಸರ್ವೋತ್ತಮನು ಜಗತ್ತು ಸತ್ಯವಾದದ್ದು. ಪಂಚಭೇದವು ಯಥಾರ್ಥವು. ಶ್ರೀಪರಮಾತ್ಮನ ಕಿಂಕರರಾದ ಜೀವರು ತಾರತಮ್ಯಉಳ್ಳವರು. ಜೀವನು ತನ್ನ ನಿಜ ಸ್ವರೂಪದಿಂದ ಶ್ರೀಪರಮಾತ್ಮನ ಸನ್ನಿಧಾನದಲ್ಲಿ ಅವನ ಸೇವೆಯನ್ನು ಮಾಡುತ್ತಾ ಆನಂದಾನುಭವ ಮಾಡುವುದೇ ಮುಕ್ತಿಯು. ನಿರ್ಮಲವಾದ ಭಕ್ತಿಯೇ ಮೋಕ್ಷಕ್ಕೆ ಸಾಧನವು. ಪ್ರತ್ಯಕ್ಷಾನುಮಾನ ಆಗಮ ಎಂಬುದಾಗಿ ಪ್ರಮಾಣಗಳು ಮೂರು. ಮುಖ್ಯ ಸಕಲ ಶ್ರುತಿವೃತ್ತಿಯಿಂದ ಪ್ರತಿಪಾದ್ಯನು ಶ್ರೀಹರಿಯು. ಎಂಬ ಒಂಬತ್ತು ತತ್ವಗಳಿಂದ ಕೂಡಿರತಕ್ಕ ಸಿದ್ಧಾಂತವನ್ನು

ಸ್ಥಾಪಿಸಿರತಕ್ಕ ಜಗದ್ಗುರುಗಳವರಾದ ಶ್ರೀಮನ್ಮಧ್ವಾಚಾರ್ಯರವರ ಮುಖ್ಯವಾದ ವಿದ್ಯಾಪೀಠದಲ್ಲಿ ಪಟ್ಟಾಭಿಷಿಕ್ತರಾದ ಶ್ರೀರಾಘವೇಂದ್ರಸ್ವಾಮಿಗಳವರೇ ನಮ್ಮ ಶ್ರೀಗುರುಸಾರ್ವಭೌಮರವರು. ಇವರು ಯಾರು ಎಂಬುದನ್ನ ತಿಳಿಸಿ ಮುಂದೆ ಇವರ ಮಹಿಮೆಯನ್ನು ವಿವರಿಸುತ್ತೇವೆ ಶಂಖುಕರ್ಣನೆಂಬ ದೇವತೆಯು ಬ್ರಹ್ಮದೇವರ ಶಾಪದಿಂದ ಅಸುರನಾದ ಹಿರಣ್ಯಕಶ್ಯಪನ ಪುತ್ರರಾಗಿ ಜನಸಿ ನೃಸಿಂಹದೇವರನ್ನು ತಮ್ಮ ಅತಿಶಯವಾದ ಭಕ್ತಿಯಿಂದ ಪ್ರತ್ಯಕ್ಷೀಕರಿಸಿಕೊಂಡು, ಭಕ್ತರಲ್ಲಿ ಅಗ್ರಗಣ್ಯರೆಂದು ಹೊಗಳಿಸಿಕೊಂಡು ಮೊದಲನೇ ಜನ್ಮದಲ್ಲಿ ಪ್ರಹ್ಲಾದರೆಂದು ಪ್ರಸಿದ್ಧರಾದರು ಎರಡನೇ ಜನ್ಮದಲ್ಲಿ ಕೃಷ್ಣಸೇವಾ ಧುರೀಣರಾಗಿ ಬಾಹ್ಲೀಕರೆಂದು ಪ್ರಖ್ಯಾತರಾದರು. ಮೂರನೇ ಜನ್ಮದಲ್ಲಿ ಮಧ್ವಮತದಲ್ಲಿಹುಟ್ಟಿದ ರಾಮಾಚಾರ್ಯರೆಂಬುವವರ ಪುತ್ರರಾಗಿ ಅವತರಿಸಿ ಸನ್ಯಾಸಾಶ್ರಮವನ್ನು ಸ್ವೀಕರಿಸಿದನಂತರ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಗಳಾದ ಶ್ರೀಕೃಷ್ಣದೇವರಾಜರಿಗೆ ಪ್ರಾಪ್ತವಾದ ಕುಹಯೋಗವೆಂಬ ಅಪಮೃತ್ಯುವನ್ನು ಪರಿಹರಿಸಿ ಸಿಂಹಾಸನಾರೂಢರಾಗಿ ಪಟ್ಟಾಭಿಷಿಕ್ತರಾದ ಶ್ರೀ ವ್ಯಾಸರಾಜರೆಂದು ಪ್ರಖ್ಯಾತರಾದರು. ಕೊನೆಯದಾಗಿ ಈ ನಾಲ್ಕನೇ ಜನ್ಮದಲ್ಲಿ ವಿಜಯನಗರದ ರಾಜರ ಆಸ್ಥಾನ ಪಂಡಿತರಾದ ಗೌತಮಗೋತ್ರೋತ್ಪನ್ನರಾದ ತಿಮ್ಮಣ್ಣ ಭಟ್ಟರೆಂಬುವರ ಪತ್ನಿಯವರಾದ ಗೋಪಿಕಾಂಬಾದೇವಿಯವರು ಯೋಗ್ಯನಾದ ಪುತ್ರನನ್ನು ಪಡೆಯಬೇಕೆಂದು ಅಪೇಕ್ಷೆಯುಳ್ಳವರಾಗಿ ಶ್ರೀ ಭಗವದನುಗ್ರಹವನ್ನು ಪಡೆಯಲು ಅವನನ್ನು ಸೇವಿಸಬೇಕೆಂಬ ತಮ್ಮ ಅಭಿಪ್ರಾಯವನ್ನು ತಮ್ಮ ಪತಿಗಳಾದ ತಿಮ್ಮಣ್ಣಭಟ್ಟರಲ್ಲಿ ವಿಜ್ಞಾಪಿಸಲು ಅವರು ಪರಮಸಂತೋಷದಿಂದ ಪತ್ನೀ ಸಮೇತರಾಗಿ ಶ್ರೀ ವೇಂಕಟಾಚಲವಾಸಿಯಾದ ಶ್ರೀನಿವಾಸನನ್ನು ಭಯಭಕ್ತಿಗಳಿಂದ ಸೇವಿಸಲು ಶ್ರೀ ಸ್ವಾಮಿಯು ಇವರ ಸೇವೆಗೆ ಮೆಚ್ಚಿ ಒಂದುದಿನ ರಾತ್ರಿಯಲ್ಲಿ ಇವರ ಸ್ವಪ್ನದಲ್ಲಿ ಶಂಖಚಕ್ರಗಧಾಪಾಣಿಯಾಗಿ ಕಾಣಿಸಿಕೊಂಡು ನಿಮ್ಮ ಇಚ್ಛೆಯಂತೆ ಯೋಗ್ಯನಾದ ಮತ್ತು ನನಗೆ ಭಕ್ತನಾಗಿ ಮುಂದೆ ಮಹಾಮಹಿಮನೆಂದು ಹೊಗಳಿಸಿಕೊಳ್ಳುವ ಪುತ್ರನನ್ನು ಹೊಂದುವೆಯೆಂದು ಹೇಳಿದಂತಾಗಲು ಕೂಡಲೆ ತಿಮ್ಮಣ್ಣಭಟ್ಟರು ಎಚ್ಚೆತ್ತವರಾಗಿ ತಮ್ಮ ಪತ್ನಿಗೆ ಸ್ವಪ್ನವೃತ್ತಾಂತವನ್ನು ತಿಳಿಸಿ ಶ್ರೀ ಸ್ವಾಮಿಯ ಸೇವೆಯನ್ನು ಮುಗಿಸಿಕೊಂಡು ಸ್ವಸ್ಥಳಕ್ಕೆ ಹಿಂತಿರುಗಲು ವಿಜಯನಗರದ ರಾಜರ ಆಶ್ರಯವು ತಪ್ಪಿದ್ದರಿಂದ ಕುಂಭಕೋಣಕ್ಕೆ ಸಮೀಪವಾದ ಭುವನಗಿರಿಯೆಂಬ ಸ್ಥಳದಲ್ಲಿ ವಾಸಮಾಡುತ್ತಿರುವಾಗ ಅವರ ಪತ್ನಿಯವರು ಭಗವದನುಗ್ರಹದಿಂದ ಗರ್ಭಧಾರಣೆಮಾಡಿ ನವಮಾಸಾನಂತರದಲ್ಲಿ ಶುಭದಿನ ಶುಭಮುಹೂರ್ತದಲ್ಲಿ ಪುತ್ರರತ್ನವನ್ನು ಪ್ರಸವಿಸಿದರು. ಇವರೇ ನಮ್ಮ ಗುರುರಾಘವೇಂದ್ರರು. ತಿಮ್ಮಣ್ಣಭಟ್ಟರು ತಮ್ಮ ಮಗನಿಗೆ ವೆಂಕಟಭಟ್ಟರೆಂದು ನಾಮಕರಣ ಮಾಡಿದರು. ವೆಂಕಟಭಟ್ಟರು ದಿನೇದಿನೇ ಅಭಿವೃದ್ಧಿಹೊಂದುತ್ತ ಪ್ರಾಪ್ತವಯಸ್ಕರಾಗಲು ತಿಮ್ಮಣ್ಣಭಟ್ಟರು ಮಗನಿಗೆ ಚೂಡಾಕರ್ಮವನ್ನು ಮಾಡಿ ಅಕ್ಷರಾಭ್ಯಾಸಕ್ಕಾಗಿ ಪ್ರಣವವನ್ನು ಬರೆದು ಇದರಂತೆ ಬರೆಯಬೇಕೆಂದು ತಮ್ಮ ಮಗನಿಗೆ ಹೇಳಲು ಆಗ ವೆಂಕಟಭಟ್ಟರು ಹಸನ್ಮುಖರಾಗಿ ಅಪ್ಪಣೆಕೊಡಿಸಿದ ಶ್ಲೋಕವನ್ನು ಇಲ್ಲಿ ಉದಹರಿಸಿದ್ದೇವೆ

ವಿಲಿಖ್ಯಭೂಮೌ ಪ್ರಥಮಂ ಕುಮಾರಂ ರೇಖಾಮಿಮಾಮೋಮಿತಿ ಸಂಪಠೇತಿ ।
ಪಿತ್ರಾನಿಯುಕ್ತಃ ಪುನರಬ್ರವೀತ್ತಂ ಅಲ್ಪೇಕಥಂಸಾಗುಣಪೂರ್ತಿ ಸಂಜ್ಞಾ ॥

ಅಂದರೆ 'ಓಂ' ಎಂಬ ಸಣ್ಣ ಅಕ್ಷರದಲ್ಲಿ ಗುಣಪೂರ್ಣನಾದ ಪರಮಾತ್ಮನ ಸಂಜ್ಞಾ ಹೇಗೆ? ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ. ಇದರಿಂದ ಅವರ ಜ್ಞಾನವು ಜನ್ಮಾಂತರ ಸಿದ್ಧವಾದದ್ದೆಂದು ತಿಳಿದು ಬರುತ್ತದೆ. ಇಂಥ ವೆಂಕಣ್ಣಭಟ್ಟರಿಗೆ ಉಪನಯನಾನಂತರ ವಿದ್ಯಾಭ್ಯಾಸಕ್ಕಾಗಿ ಇವರ ಅಣ್ಣಂದಿರಾದ ಗುರುರಾಜಾಚಾರ್ಯರು ತಮ್ಮ ಭಾವನವರಾದ ಲಕ್ಷ್ಮೀನರಸಿಂಹಾಚಾರ್ಯರೆಂಬುವರಲ್ಲಿಗೆ ಕಳುಹಿಸಿಕೊಡಲು ಅತಿಜಾಗ್ರತೆಯಾಗಿ ತಮ್ಮ ಪೂರ್ವಜನ್ಮಸಿದ್ಧವಾದ ಪ್ರತಿಭಾಬಲದಿಂದ ತರ್ಕವ್ಯಾಕರಣಾದಿ ಶಾಸ್ತ್ರಗಳಲ್ಲಿ ಅದ್ವಿತೀಯ ಪಂಡಿತರಾದ ವೆಂಕಣ್ಣಭಟ್ಟರಿಗೆ ಸತ್ಕುಲಪ್ರಸೂತಳಾದ ಸರಸ್ವತಾಂಬೆ ಎಂಬ ಸಾಧ್ವೀಮಣಿಯನ್ನು ತಂದು ಶುಭಮುಹೂರ್ತದಲ್ಲಿ ಲಗ್ನಮಾಡುವವರಾದರು. ಕೆಲವುಕಾಲಾನಂತರ ಶ್ರೀ ವೆಂಕಟೇಶನ ಅನುಗ್ರಹದಿಂದ

ಇವರಿಗೆ ಪುತ್ರೋತ್ಸವವಾಯಿತು. ಈ ಶಿಶುವಿಗೆ ಲಕ್ಷ್ಮೀನಾರಾಯಣನೆಂದು ನಾಮಕರಣ ಮಾಡಿದರು. ಹೀಗೆ ವೆಂಕಣ್ಣಭಟ್ಟರು ಸಂಸಾರಮಾಡಿಕೊಂಡು ಬಹಳ ರಿಕ್ತದೆಸೆಯಲ್ಲಿದ್ದಾಗ್ಯೂ ವಿದ್ಯಾರ್ಥಿಗಳಿಗೆ ಅನ್ನದಾನ ಮಾಡಿ ವಿದ್ಯಾದಾನಮಾಡುತ್ತಿರುವ ಸಂದರ್ಭದಲ್ಲಿ ಅತಿ ದುಷ್ಕಾಲ ಪ್ರಾಪ್ತವಾಗಿ ಸಂಸಾರ ನಡೆಯುವುದು ದುಸ್ತರವಾಗಲು ಇವರು ಸಂಚಾರಮಾಡಿ ದ್ರವ್ಯಾರ್ಜನೆಮಾಡಿಕೊಂಡುಬಂದು ವಿದ್ಯಾರ್ಥಿಗಳಿಗೆ ಅನ್ನದಾನ ಪೂರ್ವಕವಾಗಿ ವಿದ್ಯಾದಾನಮಾಡಬೇಕೆಂಬ ಅಭಿಪ್ರಾಯದಿಂದ ಒಂದು ಗ್ರಾಮಕ್ಕೆ ಬರಲಾಗಿ ಆ ಗ್ರಾಮದ ಯಜಮಾನನಾದ ದೇಶಾಯಿಯ ಮನೆಯಲ್ಲಿ ಏನೋ ಶುಭಪ್ರಯೋಜನ ನಡೆದಿರಲಾಗಿ ವೆಂಕಣ್ಣಭಟ್ಟರಿಗೆ ದೇಶಾಯರ ಮನೆಯಲ್ಲಿ ಆಮಂತ್ರಣವಾಯಿತು. ಇವರು ತಮ್ಮ ಆಹ್ನೀಕಾದಿಗಳನ್ನು ಜಾಗ್ರತೆಯಾಗಿ ಮುಗಿಸಿಕೊಂಡು ಗೃಹಸ್ಥನ ಮನೆಯಲ್ಲಿ ಒಂದುಪಾರ್ಶ್ವದಲ್ಲಿ ಪಾರಾಯಣಮಾಡುತ್ತಾ ಕುಳಿತಿರಲು ಆ ಗೃಹಸ್ಥನ ಮನೆ ಪುರೋಹಿತನು ಇವರ ಮಹಿಮೆಯನ್ನು ತಿಳಿಯದೆ ಸಾಧಾರಣ ಮನುಷ್ಯರೆಂದು ಭಾವಿಸಿ ಭೋಜನಾರ್ಥವಾಗಿ ಬರುವ ಬ್ರಾಹ್ಮಣರಿಗೋಸ್ಕರ ಕೊಡಲು ಗಂಧವನ್ನು ಮಾಡುವ ಕೆಲಸಕ್ಕೆ ಇವರನ್ನು ನೇಮಿಸಿದನು. ಇದು ಹರಿಸೇವೆಯೆಂದು ತಿಳಿದು ಗಂಧವನ್ನು ತೆಗೆದು ಪುರೋಹಿತನ ವಶಕ್ಕೆ ಕೊಟ್ಟನಂತರ ಭಗವನ್ನಿವೇದನ ಪರಿವೇಷಣಾದಿಗಳಾದನಂತರ ಬ್ರಾಹ್ಮಣ ಸುವಾಸಿನಿಯರುಗಳಿಗೆ ಗಂಧವನ್ನು ಕೊಡಲು ಅದರ ಲೇಪನದಿಂದ ಸಹಿಸಲಾಗದ ತಾಪವುಂಟಾಗಿ ಜನರು ಹಾಹಾಕಾರಪಡುವುದನ್ನು ಯಜಮಾನನು ಕಂಡು ಇದು ಏನು ಪ್ರಮಾದವು! ಹೀಗಾಗಲು ಕಾರಣವೇನೆಂದು ಭಯಗ್ರಸ್ತನಾಗಿ ಗಂಧವನ್ನು ಯಾರು ತೆಗೆದದ್ದು ಎಂದು ವಿಚಾರಣೆ ಮಾಡಲಾಗಿ ಸಮೀಪದಲ್ಲಿ ಕುಳಿತಿದ್ದ ವೆಂಕಟಭಟ್ಟರು ನಾನೇ ತೆಗೆದೆನೆಂದು ಹೇಳಲು ಆ ಗೃಹಸ್ಥನು ಇವರು ಮಹಾಮಹಿಮರಿರಬಹುದು ಎಂದು ಯೋಚಿಸಿ ಇವರ ಕ್ಷಮೆಬೇಡಿ ಜನರುಗಳ ತಾಪ ಪರಿಹಾರ ಮಾಡಿಸಬೇಕೆಂದು ಇವರ ಸಮೀಪಕ್ಕೆ ಬಂದು ಸಾಷ್ಟಾಂಗ ನಮಸ್ಕರಿಸಿ ಕ್ಷಮೆಬೇಡಲು ವೆಂಕಟ ಭಟ್ಟರು ಇದು ಪ್ರಾಮಾದಿಕವಾಗಿ ನಡೆದಿರುತ್ತದೆ. ನಾವು ಪ್ರತಿದಿವಸವೂ ಸೂಕ್ತಪಾರಾಯಣವನ್ನು ಮುಗಿಸುವ ಸಂಪ್ರದಾಯವು. ಗಂಧ ತೆಗೆಯುವ ಸಮಯದಲ್ಲಿ ವಹ್ನಿಸೂಕ್ತವನ್ನು ಪಾರಾಯಣ ಮಾಡುತ್ತಿರಬಹುದು. ಆದಕಾರಣ ಗಂಧಲೇಪನದಿಂದ ಜನರಿಗೆ ತಾಪವಾಗಿದೆ. ಉಪಾಯವಿಲ್ಲ. ಈಗ ಆ ಗಂಧವನ್ನು ತಂದುಕೊಡಿ, ತಾಪ ಶಾಂತಿಯಾಗುವಂತೆ ಕೊಡುತ್ತೇವೆಂದು ಹೇಳಿ ಆ ಗಂಧವನ್ನು ವರುಣಸೂಕ್ತದಿಂದ ಅಭಿಮಂತ್ರಿಸಿ ಕೊಡಲು ಆ ಗಂಧಲೇಪನ ಮಾತ್ರದಿಂದಲೇ ತಾಪ ಶಾಂತವಾಗಲು ಬ್ರಾಹ್ಮಣರು ಸುಖಭೋಜನ ಮಾಡಿದ್ದನ್ನು ಕಂಡು ಯಜಮಾನನು ಪರಮಾಶ್ಚರ್ಯಭರಿತನಾಗಿ ಇವರು ಮಹಾಮಹಿಮರೆಂದು ತಿಳಿದು ಇವರಲ್ಲಿ ಅತ್ಯಂತ ಭಯಭಕ್ತಿಗಳಿಂದಲೂ ಪೂಜ್ಯಬುದ್ಧಿಯಿಂದಲೂ ಇವರನ್ನು ನಮಸ್ಕರಿಸಿ ಇವರಿಗೆ ವಿಶೇಷವಾಗಿ ದ್ರವ್ಯದಾನ ಮಾಡಲು ಅದನ್ನು ತೆಗೆದುಕೊಂಡು ಸ್ವಸ್ಥಳಕ್ಕೆಹೋಗಿ ವಿದ್ಯಾರ್ಥಿಗಳಿಗೆ ವಿದ್ಯಾದಾನಮಾಡುತ್ತಾ ಕೆಲವು ಕಾಲ ಕಳೆಯಲು ಇವರಿಗೆ ಸಂಸ್ಥಾನಾಧಿಪತ್ಯಬಂದು ತಮ್ಮ ಗುರುಗಳಾಗಿ ಬಂದುದನ್ನು ಇದೇ ಯಜಮಾನನೇ ಕಂಡು ಇವರ ಮಹಿಮೆಯನ್ನು ಅರಿತವನಾದ್ದರಿಂದ ತನ್ನ ಹಿಂದಿನ ಅಪರಾಧಕ್ಕಾಗಿ ಲೇಪಗಿರಿ ಎಂಬ ಗ್ರಾಮವನ್ನು ಶ್ರೀ ಸ್ವಾಮಿಗಳವರಿಗೆ ದಾನವಾಗಿ ಕೊಟ್ಟನು. ಸದರಿಗ್ರಾಮವು ಅದ್ಯಾಪಿ ನಮ್ಮ ಸಂಸ್ಥಾನಕ್ಕೆ ನಡೆಯುತ್ತಲಿದೆ. ಈ ರೀತಿಯಾಗಿ ಅವರ ಪೂರ್ವಾಶ್ರಮದ ಮಹಿಮೆಗಳಲ್ಲಿ ಒಂದನ್ನು ತಿಳಿಸಿರುತ್ತೇವೆ. ಅನಂತರ ವೆಂಕಟಭಟ್ಟರು ಸಿದ್ಧಾಂತವ್ಯಾಸಂಗಾರ್ಥವಾಗಿ ಕುಂಭಕೋಣಕ್ಕೆ ಬಂದು ಅಲ್ಲಿದ್ದ ಸಂಸ್ಥಾನಾಧಿಪತಿಗಳೂ ಮತ್ತು ತಮ್ಮ ಗುರುಗಳೂ ಆದ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರಲ್ಲಿ ವ್ಯಾಸಂಗ ಮಾಡುತ್ತಿರುವ ಸಮಯದಲ್ಲಿ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರ ಸ್ವಪ್ನದಲ್ಲಿ ಶ್ರೀಮೂಲರಾಮನು ಕಾಣಿಸಿಕೊಂಡು ನಿಮ್ಮ ನಂತರದಲ್ಲಿ ವೆಂಕಟಭಟ್ಟರಿಗೆ ಈ ಸಂಸ್ಥಾನವನ್ನು ಕೊಡಿ ನನ್ನನ್ನು ಅರ್ಚಿಸಲು ಇವರೇ ಅರ್ಹರು ಎಂದು ಸೂಚಿಸಲಾಗಿ ಅದೇದಿವಸ ವೆಂಕಟಭಟ್ಟರ ಸ್ವಪ್ನದಲ್ಲಿಯೂ ವಾಗ್ದೇವಿಯು ಬಂದು ನೀನು ಜ್ಞಾನಕಾರ್ಯಕ್ಕಾಗಿಯೂ, ನಮ್ಮ ಯಜಮಾನರಿಂದ ಪೂಜಿಸಲ್ಪಟ್ಟ ಶ್ರೀಮೂಲರಾಮದೇವರ ಪೂಜಾರ್ಥವಾಗಿಯೂ ಜನಿಸಿರುವುದರಿಂದ ನೀನು ನಿಮ್ಮ ಗುರುಗಳ ಅಪ್ಪಣೆಯಂತೆ ಸನ್ಯಾಸಾಶ್ರಮವನ್ನು ಸ್ವೀಕರಿಸಬೇಕು. ನಿನ್ನಲ್ಲಿ ಅನುಗ್ರಹಮಾಡಲು ಬಂದಿರುತ್ತೇನೆ. ನಿನ್ನ ನಾಲಿಗೆಯನ್ನು ತೆಗೆಯೆಂದು ಹೇಳಿ ನಾಲಿಗೆಯಲ್ಲಿ ಬೀಜಾಕ್ಷರಗಳನ್ನು ಬರೆದಂತೆ ಸ್ವಪ್ನ

ವೃತ್ತಾಂತವನ್ನು ಅವರಿಗೆ ತಿಳಿಸಿ ಸನ್ಯಾಸ ಸ್ವೀಕಾರವಮಾಡುವಂತೆ ಹೇಳಲಾಗಿ ಆಗ ವೆಂಕಟಭಟ್ಟರು ತಮ್ಮ ಸ್ವಪ್ನವಿಷಯವನ್ನೂ ಗುರುಗಳಿಗೆ ನಿರೂಪಿಸಲು ಗುರುಗಳು ಬಹಳ ಸಂತೋಷಪಟ್ಟು ಇವರಿಗೆ ಸನ್ಯಾಸಾಶ್ರಮವನ್ನು ಕೊಡಲು ಇವರಿಂದ ಸಹಿತರಾಗಿ ಅಲ್ಲಿಗೆ ಸಮೀಪದಲ್ಲಿರುವ ತಂಜಾವೂರು ಎಂಬ ಪಟ್ಟಣಕ್ಕೆ ಬಂದು ಅಲ್ಲಿಯ ರಾಜರ ಸಮಕ್ಷಮದಲ್ಲಿ ಸನ್ಯಾಸಾಶ್ರಮವನ್ನು ಇವರಿಗೆ ಕೊಟ್ಟು ತಮ್ಮ ಸಂಸ್ಥಾನದ ವಿದ್ಯಾ ಸಿಂಹಾಸನದಲ್ಲಿ ಪಟ್ಟಾಭಿಷೇಕವಮಾಡಿ ಶ್ರೀರಾಘವೇಂದ್ರತೀರ್ಥರೆಂಬುದಾಗಿ ನಾಮಕರಣವನ್ನು ಮಾಡಿದರು. ನಂತರ ಗುರುಶಿಷ್ಯರಿಬ್ಬರೂ ಜೊತೆಯಲ್ಲಿ ಕಲೆತು ಸಂಚಾರ ಮಾಡುತ್ತಾ ಬಂದು ಅನೆಗೊಂದಿ ಎಂಬ ಸ್ಥಳಕ್ಕೆ ಬರುವಲ್ಲಿ ಗುರುಗಳಿಗೆ ಆಯಾಸವಾಗಿ ಅಲ್ಲಿಯೇ ಬೃಂದಾವನಸ್ಥರಾದರು. ನಂತರ ಶ್ರೀ ರಾಘವೇಂದ್ರ ಸ್ವಾಮಿಗಳವರು ಸಂಚಾರ ಮಾಡುತ್ತಿರುವ ಕಾಲದಲ್ಲಿ ನಡೆಸಿದ ಮಹಿಮೆಗಳಲ್ಲಿ ಎರಡು ಮೂರು ಮಹಿಮೆಗಳನ್ನು ನಿರೂಪಿಸುತ್ತೇವೆ ಶ್ರೀಮಠದ ದ್ವಾರಪಾಲಕನೊಬ್ಬನು ತನ್ನ ಲಗ್ನಕ್ಕಾಗಿ ಸಹಾಯ ಮಾಡಬೇಕೆಂದು ಶ್ರೀ ಸ್ವಾಮಿಗಳವರನ್ನು ಪ್ರಾರ್ಥಿಸಲಾಗಿ ಶ್ರೀ ಗುರುಗಳವರು ಆಗಲಿ, ಕಾಲಬರಲಿ ಎಂದು ಹೇಳಿದ್ದರು. ಹೀಗೆ ಕೆಲವು ದಿನಗಳು ಕಳೆದನಂತರ ಒಂದುದಿನ ಶ್ರೀ ಸ್ವಾಮಿಗಳವರು ಮೃತ್ತಿಕಾಧಾರಣಮಾಡುತ್ತಿದ್ದ ಕಾಲದಲ್ಲಿ ಆ ದ್ವಾರಪಾಲಕನು ಪುನಃ ಅವರನ್ನು ಲಗ್ನಕ್ಕಾಗಿ ಸಹಾಯಕೇಳಲು ಆಗ್ಗೆ ಶ್ರೀ ಗುರುಗಳು ಇವನ ಭಕ್ತಿ ಪರೀಕ್ಷಾರ್ಥವಾಗಿ, ಈಗ ನಮ್ಮ ಕೈಯ್ಯಲ್ಲಿರುವುದು ಮೃತ್ತಿಕಾ, ಬೇಕಾದರೆ ತೆಗೆದುಕೋ ಎಂದು ಹೇಳಲು ಆಗ ಆ ದ್ವಾರಪಾಲಕನು ಬಹಳ ಭಕ್ತಿಯಿಂದ ಅವರಿಂದ ಕೊಡಲ್ಪಟ್ಟ ಮೃತ್ತಿಕಾವನ್ನು ಮಹಾಪ್ರಸಾದವೆಂದು ಸ್ವೀಕರಿಸಿ ಶ್ರೀ ಗುರುಗಳಿಂದ ಅಪ್ಪಣೆಪಡೆದು ಹೊರಟು ಒಂದು ಗ್ರಾಮಕ್ಕೆ ಬಂದು ಸೇರುವಹೊತ್ತಿಗೆ ಸೂರ್ಯಾಸ್ತಮಾನವಾಗಿ ಬಹುಕಾಲವಾದ್ದರಿಂದ ಆಯಾಸದಿಂದ ಒಬ್ಬ ಗೃಹಸ್ಥನ ಮನೆಯ ಬಾಗಿಲಿನಲ್ಲಿ ಗುರುಗಳಿಂದ ದತ್ತವಾದ ಮೃತ್ತಿಕಾವನ್ನು ತಲೆಗಿಟ್ಟುಕೊಂಡು ಮಲಗಿ ನಿದ್ರಿಸುತ್ತಿರಲಾಗಿ, ಅರ್ಧರಾತ್ರಿ ಸಮಯದಲ್ಲಿ ಒಂದು ಬ್ರಹ್ಮರಾಕ್ಷಸವು ಬಂದು ದಾರೀಬಿಡು ನಾನು ಒಳಗೆ ಹೋಗಬೇಕೆಂದು ಗಟ್ಟಿಯಾಗಿ ಕೂಗಲು, ಆ ದ್ವಾರಪಾಲಕನು ಎಚ್ಚರಹೊಂದಿದವನಾಗಿ ನೀನು ಯಾರು ಎಂದು ಪ್ರಶ್ನಿಸಲಾಗಿ ಆಗ ಆ ಬ್ರಹ್ಮರಾಕ್ಷಸನು ತನ್ನ ಸ್ವರೂಪವನ್ನು ಹೇಳಿ, ಈ ಮನೆ ಗೃಹಸ್ಥನ ಪತ್ನಿಯು ಪ್ರಸವಿಸಿದ ಮಕ್ಕಳನ್ನೆಲ್ಲಾ ನಾನು ತೆಗೆದುಕೊಂಡು ಹೋಗಿದ್ದೇನೆ. ಈಗಲೂ ಆಕೆಯು ಪ್ರಸವಿಸಿರುತ್ತಾಳೆ. ಆ ಮಗುವನ್ನು ತೆಗೆದುಕೊಂಡು ಹೋಗಬೇಕಾಗಿದೆ. ಕಾರಣ ದಾರಿಬಿಡು, ನೀನು ದಾರೀ ಬಿಡದಿದ್ದರೆ ನಿನ್ನ ಶಿರಸ್ಸಿನ ಕೆಳಭಾಗದಲ್ಲಿರುವ ಆ ಬೆಂಕಿಯ ಗಂಟನ್ನಾದರೂ ದೂರವಿಡು ಆಗಂಟು ಉರಿಯುತ್ತಲಿದೆ. ಅದನ್ನು ನೋಡಲು ಸಾಧ್ಯವಿಲ್ಲ. ನಿನಗೆ ಬೇಕಾದಷ್ಟು ದ್ರವ್ಯ ಕೊಡುತ್ತೇನೆ. ಆ ಗಂಟನ್ನು ದೂರವಾಗಿಡು ಎನ್ನಲು ಆ ದ್ವಾರಪಾಲಕನು, ಆಗ್ಗೆ ಯೋಚಿಸಿದವನಾಗಿ ಇದು ಗುರುಗಳ ಮೃತ್ತಿಕಾ ಮಹಿಮೆ ಇದನ್ನು ಪರೀಕ್ಷಿಸಬೇಕೆಂದು ಆ ಗಂಟಿನಲ್ಲಿದ್ದ ಮೃತ್ತಿಕಾದಲ್ಲಿ ಸ್ವಲ್ಪವನ್ನು ತೆಗೆದುಕೊಂಡು ಗುರುಗಳ ಪಾದಸ್ಮರಣೆ ಮಾಡುತ್ತಾ ಆ ಬ್ರಹ್ಮರಾಕ್ಷಸನಮೇಲೆ ಒಗೆಯಲು ಆ ಬ್ರಹ್ಮರಾಕ್ಷಸವು ಅಲ್ಲೇ ಉರಿದು ಬಿದ್ದದ್ದನ್ನು ನೋಡಿ ಆಶ್ಚರ್ಯಪಡುತ್ತಿರಲು ಆ ಮನೆಯ ಒಳಗೆ ಇದ್ದ ಜನರು ಚಿಂತನವಾಗಿ ಬಹಳ ಹೊತ್ತಾದರೂ ಬ್ರಹ್ಮರಾಕ್ಷಸನು ಬರಲಿಲ್ಲವಲ್ಲ, ಯಾವಾಗ ಬರುತ್ತಾನೆಯೋ ಎಂದು ದುಃಖದಿಂದಲೂ ಘಾಬರಿಯಿಂದಲೂ ಬಂದು ಬಾಗಿಲು ತೆರೆಯುವಲ್ಲಿ ಬಾಗಿಲಲ್ಲಿದ್ದ ದ್ವಾರಪಾಲಕನು ಅವರನ್ನುದ್ದೇಶಿಸಿ ಗಾಬರಿಯಾಗಬೇಡಿ, ಬ್ರಹ್ಮರಾಕ್ಷಸನು ಮೃತನಾದನು. ನಿಮ್ಮ ಮಗುವು ಸುಖವಾಗಿರುತ್ತದೆಂದು ನಡೆದ ವೃತ್ತಾಂತವನ್ನು ಅವರಿಗೆ ತಿಳಿಸಲು, ಆ ಮನೆಯ ಗೃಹಸ್ಥನು ಬಹಳ ಸಂತೋಷಪಟ್ಟವನಾಗಿ, ಆ ದ್ವಾರಪಾಲಕನಿಗೆ ಆತನ ಇಚ್ಛಾಪ್ರಕಾರಕ್ಕೆ ತನ್ನ ತಂಗಿಯ ಮಗಳನ್ನು ಕೊಟ್ಟು ಲಗ್ನ ಮಾಡಿದನು. ದ್ವಾರಪಾಲಕನು ಬಹಳ ಸಂತುಷ್ಟನಾಗಿ ಗುರುಗಳ ಮಹಿಮೆಯನ್ನು ಕೊಂಡಾಡುತ್ತಾ ತನ್ನ ಪತ್ನೀಸಮೇತನಾಗಿ ಗುರುಗಳಿದ್ದಲ್ಲಿಗೆ ಬಂದು ಅವರಿಗೆ ದೀರ್ಘದಂಡ ಪ್ರಣಾಮಮಾಡಿ ಎಲ್ಲಾ ವೃತ್ತಾಂತವನ್ನು ಅರುಹಲು ಗುರುಗಳು ಬಹಳ ಸಂತೋಷಪಟ್ಟು ಮುಂದೆ ನಮ್ಮ ಮೃತ್ತಿಕಾಕ್ಕೆ ಮಹಾಮಹಿಮೆ ನಡೆಯಬೇಕಾಗಿದೆ. ಆದ್ದರಿಂದ ಈರೀತಿ ನಡೆದಿರುತ್ತದೆಂದು ತಿಳಿಸಿದರು. ಇದರಿಂದ ಅವರ ಮೃತ್ತಿಕಾಮಹಿಮೆ ಎಂಥದೆಂಬುದನ್ನು ತಿಳಿಯಬಹುದಾಗಿದೆ.

ಶ್ರೀಗುರುರಾಜರವರು ಹೀಗೆ ಮುಂದೆ ಸಂಚಾರಮಾಡುತ್ತಾ ಇರುವಾಗ್ಗೆ ಒಂದು ದಿನ ಇವರು ಕುಳಿತ ಮೇನಾವನ್ನು ಬೋವಿಗಳು ಮಾರ್ಗಾಯಾಸದಿಂದ ಬಳಲಿದವರಾಗಿ ಒಂದು ಊರಿನ ಸಮೀಪದಲ್ಲಿರುವ ಒಂದು ಉದ್ಯಾನವನದಲ್ಲಿದ್ದ ಒಂದು ಕಟ್ಟೆಯ ಹತ್ತಿರ ಇಳಿಸಲು, ಆ ಉದ್ಯಾನವನದ ಕಾವಲುಗಾರರು ಕುಪಿತರಾಗಿ ಈ ಸಮಾಚಾರವನ್ನು ತಮ್ಮ ಯಜಮಾನನಿಗೆ ತಿಳಿಸಿದರು. ಆತನು ಕೂಡಲೇ ಅಲ್ಲಿಗೆ ಬಂದು ಸಿಟ್ಟಿನಿಂದ ಸ್ವಾಮಿಗಳವರೊಡನೆ ಮಾತನಾಡಲು ಶ್ರೀಸ್ವಾಮಿಗಳವರು ಸಮಾಧಾನದಿಂದ ಏನು ಸಮಾಚಾರ ವೆಂದು ಕೇಳಲು ಆಗ ಆ ಗೃಹಸ್ಥನು ಈಗ್ಗೆ 3–4 ದಿವ್ಸಗಳ ಕೆಳಗೆ ನನ್ನ ಮಗನು ಸರ್ಪದಂಶನದಿಂದ ಮೃತ ನಾದನು ಅವನ ಸಮಾಧಿಯನ್ನು ಇಲ್ಲಿ ಮಾಡಿದ್ದೇವೆ. ನೀವು ಇಲ್ಲಿ ಇಳಿಯಬಹುದೇ ಇದರಿಂದ ನನಗೆ ಬಹಳ ದುಃಖವಾಗಿದೆ ಎಂದು ಹೇಳಲು, ಆಗ ಸ್ವಾಮಿಗಳವರು ಆತನನ್ನು ಕುರಿತು, ನಾವು ಮೃತರಾದವರ ಸಮಾಧಿಯ ಹತ್ತಿರದಲ್ಲಿಳಿಯುವ ಪದ್ಧತಿಯೇ ಇಲ್ಲಾ, ನಿನ್ನ ಮಗನು ಮೃತನಾಗಿಲ್ಲವಾದ ಕಾರಣ ನಾವು ಇಲ್ಲಿ ನಮ್ಮ ಮೇನಾವನ್ನು ಇಳಿಸಿರುತ್ತೇವೆ. ನಿನ್ನ ಮಗನನ್ನು ತೆಗೆಸಿ ನಮ್ಮ ಮುಂದೆ ಇಡಿಸುವವನಾಗು. ನಿನ್ನ ಮಗನು ಬದುಕುತ್ತಾನೆಂದು ಹೇಳಲು ಅವನು ಪರಮಾಶ್ಚರ್ಯವನ್ನುಹೊಂದಿ, ಇವರು ಮಹಾತ್ಮರಿರ ಬಹುದು ಇವರನ್ನು ಪರೀಕ್ಷಿಸಿ ನೋಡೋಣವೆಂದು ಸಮಾಧಿಯನ್ನು ತೆಗೆಸಲು ಶ್ರೀಗುರುಸಾರ್ವಭೌಮ ರವರು ತಮ್ಮ ಕಮಂಡಲೋದಕವನ್ನು ಪ್ರೋಕ್ಷಿಸಲು, ನಿದ್ರೆಯಿಂದ ಎಚ್ಚೆತ್ತವನಂತೆ ಆ ಗೃಹಸ್ಥನ ಮಗನು ಎದ್ದುಬರಲು, ಆಗ್ಗೆ ಆ ಗೃಹಸ್ಥನು ಪರಮ ಸಂತೋಷಭರಿತನಾಗಿ ಶ್ರೀಸ್ವಾಮಿಗಳವರಿಗೆ ಸಾಷ್ಟಾಂಗ ಪ್ರಣಾಮವನ್ನುಮಾಡಿ ಅತಿಶಯವಾದ ಭಕ್ತಿಯಿಂದ ಶ್ರೀಸ್ವಾಮಿಗಳವರನ್ನು ಕುರಿತು "ನನ್ನ ಮಹಾಪರಾಧ ವನ್ನು ಕ್ಷಮಿಸಬೇಕು. ನನಗೆ ಇದ್ದ ಒಬ್ಬ ಮಗನನ್ನು ಬದುಕಿಸಿ ನನ್ನ ವಂಶವನ್ನು ಉದ್ಧಾರಮಾಡಿದಿರಿ ಇದರಿಂದ ನನಗೆ ಬಹಳ ಸಂತೋಷವಾಗಿದೆ ಈ ಸಂತೋಷ ಕಾಲದಲ್ಲಿ ನಾನು ಈ ಗ್ರಾಮವನ್ನು ತಮ್ಮ ಸಂಸ್ಥಾನಕ್ಕೆ ದಾನವಾಗಿ ಕೊಟ್ಟಿದ್ದೇನೆ ಸ್ವೀಕರಿಸಬೇಕು ಎಂದು ಬಹುವಿಧವಾಗಿ ಪ್ರಾರ್ಥಿಸಲು ಆಗ ಶ್ರೀಗುರು ರಾಘವೇಂದ್ರಸ್ವಾಮಿಗಳವರು ನಾವು ಮೃತರಾದವರನ್ನು ಬದುಕಿಸಲಾರೆವು. ಅದು ಶ್ರೀಹರಿಗೆ ಸೇರಿದ್ದು. ನಿನ್ನ ಮಗನು ಮೃತನಾಗಿರಲಿಲ್ಲವಾಗಿ ಬದುಕಿದನು. ನೀನು ದಾನವಾಗಿ ಕೊಟ್ಟಿರುವ ಗ್ರಾಮವನ್ನು ಶ್ರೀ ಮೂಲ ರಾಮಚಂದ್ರದೇವರ ದೀಪಾರಾಧನಕ್ಕಾಗಿಯೂ ಮತ್ತು ನಿನಗೂ ಮತ್ತು ನಿನ್ನ ವಂಶಕ್ಕೂ ಶ್ರೀಯಸ್ಸುಂಟಾಗುವ ಸಲುವಾಗಿಯೂ ಸ್ವೀಕರಿಸಿದ್ದೇವೆ ಎಂದು ಅಪ್ಪಣೆ ಕೊಡಿಸಲು ಆತನು ಪರಮ ಸುಪ್ರೀತ ನಾಗಿ ಶ್ರೀ ಸ್ವಾಮಿಗಳನ್ನು ತನ್ನ ಮನೆಗೆ ಕರೆದುಕೊಂಡುಹೋಗಿ ಪೂಜಾದಿಗಳಿಂದ ಸತ್ಕರಿಸಿ ಗ್ರಾಮವನ್ನು ದಾನವಾಗಿ ಕೊಟ್ಟನು. ಈ ಗ್ರಾಮವು ಈಗಲೂ ನಮ್ಮ ಸಂಸ್ಥಾನಕ್ಕೆ ನಡೆಯುತ್ತಾ ಇದೆ.

ಶ್ರೀ ಗುರುಸಾರ್ವಭೌಮರವರು ಬೃಂದಾವನ ಪ್ರವೇಶಮಾಡುವ ಸಲುವಾಗಿ ಈ ಮಂತ್ರಾಲಯ ಗ್ರಾಮವನ್ನು ಸಂಪಾದಿಸಲು ತೋರಿಸಿರುವ ಅವರ ಮಹಿಮೆಯನ್ನು ತಿಳಿಸಿ ಅವರ ಮಹಿಮಾವರ್ಣನವನ್ನು ಮುಕ್ತಾಯ ಮಾಡುತ್ತೇವೆ. ಶ್ರೀಗುರು ರಾಘವೇಂದ್ರಸ್ವಾಮಿಗಳವರು ಸಂಚಾರಮಾಡುತ್ತಾ ಈ ಆದವಾನಿ ಎಂಬ ಊರಿಗೆ ಬರಲು ಅಲ್ಲಿ ತಮ್ಮ ಅನುಗ್ರಹದಿಂದ ಮುಂದಕ್ಕೆ ಬಂದು ಆದವಾನಿ ನವಾಬರಾದ ಸಿದ್ದಿ ಮಸೂದಖಾ಼ ಎಂಬುವವರ ದಿವಾನರಾಗಿದ್ದ ವೆಂಕಣ್ಣಪಂತರೆಂಬ ತಮ್ಮ ಶಿಷ್ಯರಿಗೆ ಶ್ರೀಮುಖವನ್ನು ಕಳುಹಿಸಲಾಗಿ, ವೆಂಕಣ್ಣಪಂತರು ಶ್ರೀಮುಖವನ್ನೂ ಮತ್ತು ಫಲಮಂತ್ರಾಕ್ಷತೆಯನ್ನೂ ಬಹುಭಕ್ತಿಯಿಂದ ಸ್ವೀಕರಿಸಿ, ಶ್ರೀಸ್ವಾಮಿಗಳವರ ಆಗಮನಕ್ಕೆ ತಕ್ಕ ಸಿದ್ಧತೆಗಳನ್ನುಮಾಡಿ, ಅವರ ಮಾರ್ಗನಿರೀಕ್ಷಣೆ ಮಾಡುತ್ತಿದ್ದು ಶ್ರೀಸ್ವಾಮಿಗಳವರ ಸವಾರಿಯು ದಿಗ್ವಿಜಯವಾದಕೂಡಲೆ ಅವರನ್ನು ಮರ್ಯಾದೆಯಿಂದ ಸಕಲ ವೈಭವದೊಡನೆ ಪಟ್ಟಣ ಪ್ರವೇಶಮಾಡಿಸಿ ತನ್ನ ಮನೆಗೆ ಕರೆದುಕೊಂಡು ಬಂದು ಶ್ರೀಸ್ವಾಮಿಗಳವರಿಗೆ ಪಾದಪೂಜಾ ಭಿಕ್ಷಾದಿಗಳನ್ನು ಬಹುಭಕ್ತಿಪುರಸ್ಸರವಾಗಿ ನಡೆಸಿದ ವೃತ್ತಾಂತವನ್ನು ತನ್ನ ನವಾಬನಾದ ಶಿದ್ದಿ ಮಸೂದಾಖಾನರಿಗೆ ತಿಳಿಸಿ ಶ್ರೀಗುರುಗಳವರ ದರ್ಶನವನ್ನು ತಾವೂ ಬಂದು ತೆಗೆದುಕೊಳ್ಳಬೇಕೆಂದು ತಿಳಿಸಲು ಆಗ ನವಾಬರು ನಿಮ್ಮ ಗುರುಗಳಲ್ಲಿ ಏನು ಮಹಿಮೆ ಇದೆ. ಅವರನ್ನೇತಕ್ಕೆ ನಾನು ದರ್ಶನ ಮಾಡಬೇಕೆಂದು ಕೇಳಲಾಗಿ ಆಗ್ಗೆ ವೆಂಕಣ್ಣಪಂತನು ನಾನು ನಿಮ್ಮ ವಿಶ್ವಾಸಕ್ಕೆ ಪಾತ್ರನಾಗಿ ಈ ದಿವಾನ ಪದವಿಗೆ ಬಂದಿರ

ವುದು ಅವರ ಅನುಗ್ರಹದಿಂದಲೇ ಎಂದು ತಿಳಿಸಲು ನವಾಬರು ದಿವಾನರ ಮಾತಿಗೆ ಸಮ್ಮತಿಸಿ ಆಗಲಿ ಈ ದಿವ್ಸ ಸಾಯಂಕಾಲಕ್ಕೆ, ನಾನು ನಿಮ್ಮ ಗುರುಗಳ ದರ್ಶನಕ್ಕೆ ಬರುತ್ತೇನೆಂದು ನಿಮ್ಮ ಗುರುಗಳಿಗೆ ತಿಳಿಸಿರಿ ಎಂದು ಹೇಳಲು ಆ ಪ್ರಕಾರಕ್ಕೆ ವೆಂಕಣ್ಣಪಂತರು ತಮ್ಮ ಗುರುಗಳಿಗೆ ನವಾಬರ ಆಗಮನ ವಿಚಾರವನ್ನು ತಿಳಿಸಿದರು ಆಗ ಶ್ರೀಸ್ವಾಮಿಗಳವರು 'ಅವಶ್ಯವಾಗಿ ಬರಲಿ ಎಂದು ಅಪ್ಪಣೆ ಕೊಡಿಸಿದರು. ಸಾಯಂಕಾಲವಾಗುತ್ತಲೇ ಶ್ರೀಸ್ವಾಮಿಗಳವರನ್ನು ಪರೀಕ್ಷಿಸಬೇಕೆಂದು ದುರಭಿಪ್ರಾಯವುಳ್ಳ ಸಿದ್ದಿಮಸೂದಖಾನನು ಒಂದು ಹರಿವಾಣ ದಲ್ಲಿ ಶ್ರೀಹರಿಗುರುಗಳಿಗೆ ನಿವೇದಿಸಲು ಅನರ್ಹವಾದ ಪದಾರ್ಥಗಳನ್ನು ಇಡಿಸಿಕೊಂಡು ಶ್ರೀಗುರುರಾಜರ ದರ್ಶನಕ್ಕೆ ಬಂದು ಶ್ರೀಸ್ವಾಮಿಗಳವರಿಗೆ ನಮಸ್ಕರಿಸಿ ಶುಭ್ರವಾದ ವಸ್ತ್ರದಿಂದ ಆಚ್ಛಾದಿತವಾದ ಹರಿವಾಣ ವನ್ನು ಶ್ರೀಗುರುಗಳ ಮುಂದಿಟ್ಟು ಇದನ್ನು ನಿಮ್ಮ ದೇವರಿಗೆ ಸಮರ್ಪಿಸಬೇಕೆಂದು ವಿಜ್ಞಾಪಿಸಲು, ಶ್ರೀ ಸ್ವಾಮಿಗಳವರು ಹಸನ್ಮುಖರಾಗಿ ಆಗಲಿ ಅಗತ್ಯವಾಗಿ ಸಮರ್ಪಿಸುತ್ತೇವೆಂದು ಹೇಳಿ ತಮ್ಮ ಕಮಂಡಲೋ ದಕದಿಂದ ಆ ಹರಿವಾಣವನ್ನು ಪ್ರೋಕ್ಷಿಸಿ ನಂತರ ವಸ್ತ್ರವನ್ನು ತೆಗೆಯಿಸಲು ನವಾಬರು ತಂದಿದ್ದ ನಿವೇದನಾ ನರ್ಹವಾದ ಪದಾರ್ಥಗಳೆಲ್ಲವೂ ಫಲಪುಷ್ಪಗಳಾಗಿರುವುದನ್ನು ನವಾಬರು ಕಂಡು ಆಶ್ಚರ್ಯಭಯಗಳಿಂದ ಕೂಡಿದವರಾಗಿ, ಶ್ರೀ ಸ್ವಾಮಿಗಳವರಲ್ಲಿ ತಾವು ಮಾಡಿದ ಅಪರಾಧಕ್ಕಾಗಿ ಕ್ಷಮೆಯನ್ನು ಬೇಡಲು ಶ್ರೀ ಸ್ವಾಮಿಗಳವರು ನವಾಬರನ್ನು ಸವಿನುಡಿಗಳಿಂದ ಸಂತೈಸಿ ಬೀಳ್ಕೊಟ್ಟರು. ನವಾಬರು ತಮ್ಮ ದಿವಾನನಾದ ವೆಂಕಣ್ಣಪಂತನೊಡನೆ ತಮ್ಮ ಅರಮನೆಗೆ ಬಂದು ವೆಂಕಣ್ಣಪಂತನನ್ನು ಕುರಿತು ನಾನು ನಿಮ್ಮ ಶ್ರೀ ಸ್ವಾಮಿಗಳವರ ಮಹಿಮೆಯನ್ನು ಅರಿಯದೆ ಅವರಲ್ಲಿ ಅಪರಾಧಿಯಾಗಿದ್ದೇನೆ. ಆದಕಾರಣ ಅವರ ಸಂತೋಷಾರ್ಥವಾಗಿ ಶ್ರೀ ಸ್ವಾಮಿಗಳವರು ಏನನ್ನು ಅಪೇಕ್ಷಿಸಿದರೂ ಅದನ್ನು ಕೊಡಲು ಸಿದ್ಧನಿದ್ದೇನೆ ಎಂದು ಹೇಳಿ ಈ ವಿಷಯವನ್ನು ನಿಮ್ಮ ಸ್ವಾಮಿಗಳವರಿಗೆ ತಿಳಿಸು ಎಂದು ಹೇಳಿಕಳುಹಿಸಲು ಅದೇ ಪ್ರಕಾರಕ್ಕೆ ವೆಂಕಣ್ಣಪಂತನು ಶ್ರೀ ಸ್ವಾಮಿಗಳವರಿಗೆ ನವಾಬರ ಪ್ರಾರ್ಥನೆಯನ್ನು ತಿಳಿಸಿದನು. ಈ ಕಾರ್ಯಕ್ಕಾಗಿಯೇ ಬಂದಿದ್ದ ಶ್ರೀ ಸ್ವಾಮಿಗಳವರು, ತುಂಗಭದ್ರಾತೀರದಲ್ಲಿದ್ದ ಮಂತ್ರಾಲಯವೆಂಬ ಗ್ರಾಮವು ಪೂರ್ವದಲ್ಲಿ ನಮಗೆ ಸೇರಿದ್ದು ಕಾರಣಾಂತರದಿಂದ ಕೈತಪ್ಪಿದೆಯಾಗಿ, ಸದರಿ ಗ್ರಾಮದಲ್ಲಿ ತಾವು ಪ್ರಹ್ಲಾದರಾಗಿದ್ದಾಗ್ಗೆ ಯಜ್ಞ ಮಾಡಿರುವುದನ್ನೂ ಮತ್ತು ಆ ಯಜ್ಞಮಾಡಿದ ಸ್ಥಳದಲ್ಲಿ ಈಗ ತಮ್ಮ ಬೃಂದಾವನವಾಗಬೇಕಾಗಿರುವುದನ್ನೂ ರಹಸ್ಯವಾಗಿ ವೆಂಕಣ್ಣಪಂತನಿಗೆ ತಿಳಿಸಿ ಈಗ ಆ ಗ್ರಾಮವನ್ನು ನವಾಬರಿಂದ ತಮಗೆ ದಾನವಾಗಿ ಕೊಡಿಸ ಬೇಕೆಂದು ತಿಳಿಸಿದರು. ಇವರ ಇಚ್ಛೆಯಂತೆ ನವಾಬನು ಈ ಮಂತ್ರಾಲಯ ಗ್ರಾಮವನ್ನು ಶ್ರೀ ಸ್ವಾಮಿ ಗಳವರಿಗೆ ದಾನವಾಗಿ ಕೊಡಲು, ಆಗ್ಗೆ ಶ್ರೀಗುರುಗಳವರು ಪರಮಸಂತೋಷದಿಂದ ತಮ್ಮ ಶಿಷ್ಯನೂ, ದಿವಾನನೂ ಆದ ವೆಂಕಣ್ಣಪಂತನನ್ನು ಕರೆದು ಅವನಿಗೆ ತಾವು ಕ್ಷಿಪ್ರದಲ್ಲಿಯೇ ಬೃಂದಾವನ ಪ್ರವೇಶಮಾಡುವ ವಿಷಯವನ್ನು ತಿಳಿಸಿ ಅದಕ್ಕೆ ತಕ್ಕ ಏರ್ಪಾಡುಗಳಿಗೂ ಮತ್ತು ಬೃಂದಾವನದ ತಯಾರಿಕೆಗೂ ಆಜ್ಞಾಪಿಸಲು ಇವರ ಆಜ್ಞಾನುಸಾರವಾಗಿ ಎಲ್ಲಾ ಕೆಲಸಕಾರ್ಯಗಳೂ ಸಿದ್ಧವಾಗಲು ಆಗ ಶ್ರೀ ಸ್ವಾಮಿಗಳವರು ಒಂದು ಶುಭಮುಹೂರ್ತದಲ್ಲಿ ತಮ್ಮ ಶಿಷ್ಯರಾದ ಯೋಗೀಂದ್ರತೀರ್ಥ ಶ್ರೀಪಾದಂಗಳವರಿಗೆ ಸಂಸ್ಥಾನವನ್ನು ಒಪ್ಪಿಸಿ ಶ್ರೀ ಮೂಲರಾಮಚಂದ್ರದೇವರ ಪೂಜಾರಾಧನಾದಿಗಳನ್ನು ಮಾಡಿಕೊಂಡ ಶಿಷ್ಯೋದ್ಧಾರಮಾಡಿ ನಮ್ಮ ಸಿದ್ಧಾಂತವನ್ನು ಸ್ಥಾಪನಾ ಮಾಡುತ್ತಾ ಸುಖವಾಗಿ ಇರಬೇಕೆಂದು ಆಶೀರ್ವದಿಸಿ ತಾವು ಸ್ನಾನಾಹ್ನಿಕಾದಿಗಳನ್ನು ಮುಗಿಸಿ ಆ ದಿವಸ ಶ್ರೀ ಮೂಲರಾಮಚಂದ್ರರ ಪೂಜಾದಿಗಳನ್ನು ಮಾಡಿ ಶಿಷ್ಯರುಗಳಿಗೆ ಅನುಗ್ರಹಪೂರ್ವಕ ಫಲಮಂತ್ರಾಕ್ಷತೆಯನ್ನು ಕೊಟ್ಟು ತಮ್ಮ ಶಿಷ್ಯರಾದ ಯೋಗೀಂದ್ರತೀರ್ಥರನ್ನು ಕರೆದು ನಾವು ಬೃಂದಾವನ ವನ್ನು ಪ್ರವೇಶಮಾಡಿದ ನಂತರ ಮೌನವ್ರತವನ್ನು ಆಚರಿಸಿ ಧ್ಯಾನಪರರಾಗುತ್ತೇವೆ. ಕೆಲವುಕಾಲ ಕಳೆದ ನಂತರ ನಮ್ಮ ಮುಖದಿಂದ ಪ್ರಣವೋಚ್ಚಾರಣೆಯು ಪ್ರಾರಂಭವಾದಕೂಡಲೆ ನೀವು ನಮ್ಮ ಶಿರಸ್ಸಿನಮೇಲೆ ಸಾಲಿಗ್ರಾಮಗಳನ್ನು ಇಟ್ಟುಕೊಳ್ಳುತ್ತಾ ಹೋಗಿ ಬೃಂದಾವನ ಪ್ರತಿಷ್ಠಾದಿಗಳನ್ನು ಮಾಡಿ ಬ್ರಾಹ್ಮಣ ಸುವಾಸಿನಿಯರಿಗೆ ಭೋಜನಮಾಡಿಸಿ ದಕ್ಷಿಣಾಪ್ರದಾನಮಾಡಿ ಈ ದಿವಸವೇ ನಮ್ಮ ಆರಾಧನೆಯನ್ನು ಆಚರಿಸತಕ್ಕದ್ದೆಂತಲೂ ಇನ್ನು ಮುಂದೆ ಈ ಸ್ಥಳದಲ್ಲಿ ವಿಶೇಷ ಮಹಿಮೆ ನಡೆಯುತ್ತದೆಂಯಾಗಿ ಸಕಲ

ಸಜ್ಜನರೂ ಇಲ್ಲಿಗೆ ಬಂದು ನಮ್ಮ ಬೃಂದಾವನಸೇವಾದಿಗಳನ್ನು ಮಾಡಿ ಅವರವರ ಮನೋಭೀಷ್ಟಗಳನ್ನು ಹೊಂದುತ್ತಾರೆಂತಲೂ, ಈ ವಿಷಯದಲ್ಲಿ ತಮ್ಮ ಉಪಾಸ್ಯಮೂರ್ತಿಯೇ ಸಾಕ್ಷಿಯಾಗಿರುತ್ತಾನೆಂತಲೂ ಅಪ್ಪಣೆ ಕೊಡಿಸಿ ತಾವು ಹೇಳಿದರೀತಿಯಲ್ಲಿ ವಿರೋಧಿಕೃತು ಸಂವತ್ಸರದ ಶ್ರಾವಣ ಬಹುಳ ದ್ವಿತೀಯಾ ಗುರುವಾರದಲ್ಲಿ ಬೃಂದಾವನ ಪ್ರವೇಶಮಾಡಲು ನಂತರ ಅವರ ಶಿಷ್ಯರಾದ ಯೋಗೀಂದ್ರತೀರ್ಥ ಶ್ರೀಪಾದಂಗಳವರು ತಮ್ಮ ಗುರುಗಳು ಅಪ್ಪಣೆಕೊಡಿಸಿದ ಪ್ರಕಾರಕ್ಕೆ ಯಾವತ್ತು ಕೆಲಸಕಾರ್ಯಗಳನ್ನು ಸಾಂಗವಾಗಿ ನೆರವೇರಿಸಿದರು. ತದಾರಭ್ಯ ಅಂದರೆ ಈಗ್ಗೆ ಸುಮಾರು ಎರಡನೂರು ಎಪ್ಪತ್ತು ವರ್ಷಗಳಿಂದ ಈ ಸ್ಥಳದಲ್ಲಿ ಅನೇಕ ಮಹಿಮಾದಿಗಳು ಕಂಡುಬಂದು ಅನೇಕ ಭಕ್ತರು ಬಂದು ಅವರ ಸೇವೆಮಾಡಿ ಶ್ರೀಗುರುಸಾರ್ವಭೌಮರವರ ಪೂರ್ಣಾನುಗ್ರಹಕ್ಕೆ ಪಾತ್ರರಾಗಿ ಅವರವರ ಮನೋರಥಗಳನ್ನು ಹೊಂದುತ್ತಿರುವುದು ಜಗತ್ಪ್ರಸಿದ್ಧವಾಗಿದೆ. ಕಲಿಯುಗದ ಕಾಲವು ಮುಂದೆ ಮುಂದೆ ಬಂದಹಾಗೆಲ್ಲ ಶ್ರೀಗುರುರಾಜಸಾರ್ವಭೌಮರವರ ಮಹಿಮೆಯೂ ಅಭಿವೃದ್ಧಿಯಾಗುತ್ತ ಅನೇಕ ಭಕ್ತರುಗಳು ಅವರ ಪೂರ್ಣಾನುಗ್ರಹಕ್ಕೆ ಪಾತ್ರರಾಗುತ್ತಲಿದ್ದಾರೆ. ಇಂಥ ಮಹಾನುಭಾವರ ಮಹಿಮೆಯು ಅಗಮ್ಯವಾದದ್ದೆಂದು ಅಪ್ಪಣಾಚಾರ್ಯರು ಹೇಳಿರುವುದು ಅತ್ಯಂತ ಸತ್ಯವಾದದ್ದಾದ ಕಾರಣ ಅವರಿಂದ ರಚಿಸಲ್ಪಟ್ಟ ಗುರುಸ್ತೋತ್ರದ ಕೊನೆಯಭಾಗದಲ್ಲಿ ಹೇಳಿದ ರೀತಿಯಲ್ಲಿ ಸಕಲ ಸಜ್ಜನರೂ ಭಕ್ತಿಪುರಸ್ಸರವಾಗಿ ಶ್ರೀಗುರುಸಾರ್ವಭೌಮರವರ ಸೇವಾದಿಗಳನ್ನು ಮಾಡಿ ಅವರ ಪರಮಾನುಗ್ರಹಕ್ಕೆ ಪಾತ್ರರಾಗಬೇಕೆಂದು ನಾವು ಅಪೇಕ್ಷಿಸುತ್ತೇವೆ. ಇಂಥ ಮಹಾನುಭಾವರ ದರ್ಶನಾಪೇಕ್ಷೆಯಿಂದ ಇಲ್ಲಿಗೆ ದಯಮಾಡಿಸಿರುವ ನಮ್ಮ ಪ್ರಭುಗಳವರ ಪೂರ್ವೀಕರು ಎಂತಹವರೆಂಬುದನ್ನು ನಿರೂಪಿಸಿ ಮುಂದೆ ಹೇಳುವ ರೀತಿಯಲ್ಲಿ ಪ್ರಭುಗಳವರಿಗೆ ಆಶೀರ್ವದಿಸಿರುತ್ತೇವೆ.

ಪ್ರಭುಗಳವರೇ! ತಮ್ಮ ಪೂರ್ವೀಕರು ಮಹಾಧೀರರೂ, ಪ್ರಜಾರಂಜಕರೂ, ಧರ್ಮವಂತರೂ ಆದ ಶ್ರೀ ಚಿಕ್ಕದೇವರಾಜ ಒಡೆಯರವರ ಕಾಲದಲ್ಲಿ ಈಗ ತಾವು ಯಾರ ದರ್ಶನಕ್ಕಾಗಿ ದಯಮಾಡಿಸಿರುವರೋ ಅಂತಹ ಮಹಾತಪಸ್ವಿಗಳಾದ ಶ್ರೀ ರಾಘವೇಂದ್ರಗುರುವರೇಣ್ಯರವರು ಸಂಚಾರಕ್ರಮದಿಂದ ಶ್ರೀರಂಗಪಟ್ಟಣಕ್ಕೆ ದಿಗ್ವಿಜಯಮಾಡಿಸಿದಾಗ ಶ್ರೀ ಚಿಕ್ಕದೇವರಾಜಒಡೆಯ ಮಹಾರಾಜರು ಶ್ರೀ ಗುರುರಾಜರವರಿಗೆ ಅದ್ವಿತೀಯ ಮರ್ಯಾದೆಯನ್ನು ಮಾಡಿ ಅರಮನೆಯಲ್ಲಿ ಪೂಜಾದಿಗಳನ್ನೇರ್ಪಡಿಸಿ ಶ್ರೀ ಗುರುರಾಜರ ಅಗಾಧ ಮಹಿಮೆ ಮತ್ತು ಪಾಂಡಿತ್ಯ ನೋಡಿ ಸಂತೋಷಭರಿತರಾಗಿ "ನೆಲ್ಲೂರು" (ದೇವರಾಜಪುರ) ಎಂಬ ಗ್ರಾಮವನ್ನು ದಾನವಾಗಿ ಕೊಟ್ಟು ಶ್ರೀ ಗುರುರಾಜರವರ ಸೇವೆಮಾಡಿ ಕೃತಾರ್ಥರಾದರು. ಶ್ರೀಮನ್ಮಹಿಶೂರು ಮಹಾರಾಜರುಗಳಿಗೂ ನಮ್ಮ ಸಂಸ್ಥಾನಕ್ಕೂ ಆಕಾಲಾರಭ್ಯ ಗುರುಶಿಷ್ಯಭಾವವು ನೆಲೆಗೊಂಡಿದೆ. ತರುವಾಯ ತಮ್ಮ ತಾತಂದಿರಾದ ಮುಮ್ಮಡಿ ಕೃಷ್ಣರಾಜಪ್ರಭುಗಳು ತಾವು ರತ್ನಸಿಂಹಾಸನದಲ್ಲಿ ಪಟ್ಟಾಭಿಷಿಕ್ತರಾಗಿ ರಾಜ್ಯಪರಿಪಾಲನಮಾಡುತ್ತಿರುವ ಸಮಯದಲ್ಲಿ ತಮ್ಮ ಸಂಸ್ಥಾನದಲ್ಲಿ ನಡೆಯತಕ್ಕ ಸಕಲ ಧರ್ಮಕಾರ್ಯಗಳೂ ಆಚಂದ್ರಾರ್ಕವಾಗಿ ನಡೆದುಬರಲು ಅನುಕೂಲವಾದ ಸಕಲವಿಧ ಸೌಕರ್ಯವನ್ನೇರ್ಪಡಿಸಿ ವಿದ್ಯಾವಂತರನ್ನು ಬರಮಾಡಿಕೊಂಡು ಅವರವರ ಯೋಗ್ಯತಾನುಸಾರವಾದ ಮರ್ಯಾದೆಗಳಿಂದ ಅವರವರನ್ನು ಪುರಸ್ಕರಿಸಿ ಅವರುಗಳು ತಮ್ಮ ಸಂಸ್ಥಾನದಲ್ಲಿಯೇ ಪುತ್ರಪೌತ್ರಪಾರಂಪರ್ಯವಾಗಿ ನೆಲೆಯಾಗಿ ನಿಲ್ಲಬೇಕೆಂಬ ಉದ್ದೇಶದಿಂದ ಅವರುಗಳಿಗೆ ಬೇಕಾದ ಸಕಲ ಅನುಕೂಲಗಳನ್ನು ಮಾಡಿಕೊಟ್ಟಿರುವುದಲ್ಲದೆ ತ್ರಿಮತಸ್ಥರಾದ ಅನೇಕ ಪೀಠಾಧಿಪತಿಗಳನ್ನು ತಮ್ಮ ಸ್ಥಳಕ್ಕೆ ಬರಮಾಡಿಕೊಂಡು ಅವರುಗಳಿಗೆ ಸಕಲವಿಧವಾದ ಸೌಕರ್ಯಗಳನ್ನು ಕಲ್ಪಿಸಿ, ಅವರುಗಳು ನಿರಾತಂಕವಾಗಿ ದೇವಪೂಜಾ ಪಾಠಪ್ರವಚನಾದಿಗಳನ್ನು ಮಾಡಿಕೊಂಡು ಇರುವಂತೆ ಏರ್ಪಡಿಸಿ ಧರ್ಮದಿಂದ ರಾಜ್ಯಪರಿಪಾಲನಮಾಡುತ್ತಾ ಧರ್ಮಪ್ರಭುಗಳೆಂದು ಹೊಗಳಿಸಿಕೊಂಡರು ನಂತರ ಅವರ ಪುತ್ರರಾದ ಚಾಮರಾಜೇಂದ್ರ ಪ್ರಭುಗಳವರು ತಮ್ಮ ತಂದೆಯವರಂತೆಯೇ ಧರ್ಮನಿಷ್ಠರಾಗಿ ಸಂಸ್ಕೃತ ವಿದ್ಯೆಗೆ ಪ್ರೋತ್ಸಾಹಕೊಟ್ಟು ಸಂಸ್ಕೃತ ವಿದ್ಯಾಶಾಲೆಯನ್ನು ಏರ್ಪಡಿಸಿ ಧರ್ಮದಿಂದ ರಾಜ್ಯಪರಿಪಾಲನ ಮಾಡಿದರು. ಇವರ ನಂತರ ಇವರ ಅರ್ಧಾಂಗಿನಿಯವರಾದ ವಾಣಿವಿಲಾಸ ಸನ್ನಿಧಾನದವರು ತಮ್ಮ

ಮಾವಂದಿರು ಮತ್ತು ಯಜಮಾನರು ಇವರುಗಳಿಂದ ನಡೆಸಲ್ಪಟ್ಟ ಸಕಲ ಧರ್ಮಕಾರ್ಯಗಳಿಗೂ ಯಾವ ವಿಧವಾದ ಲೋಪ ಬರದಂತೆ ಧರ್ಮದಿಂದ ರಾಜ್ಯಪರಿಪಾಲನೆಮಾಡಿ ವಿಖ್ಯಾತರಾದರು. ತರುವಾಯ ಪಟ್ಟಾಭಿಷಿಕ್ತರಾದ ಶ್ರೀನಾಲ್ವಡಿ ಕೃಷ್ಣರಾಜೇಂದ್ರ ಪ್ರಭುಗಳವರು ತಮ್ಮ ಅನುಜರಾದ ಕಂಠೀರವ ನರಸಿಂಹ ರಾಜ ಪ್ರಭುಗಳಿಂದ ಕೂಡಿಕೊಂಡು ತಮ್ಮ ಪೂರ್ವೀಕರಂತೆ ಧರ್ಮಕಾರ್ಯಗಳಿಗೆ ಉತ್ತೇಜಕರಾಗಿ ತಮ್ಮ ತಂದೆಯವರಿಂದ ಸ್ಥಾಪಿತವಾದ ಸಂಸ್ಕೃತವಿದ್ಯಾ ಪಾಠಶಾಲೆಯನ್ನು ಅಭಿವೃದ್ಧಿಪಡಿಸುವುದರಿಂದ ತೃಪ್ತರಾಗದೆ ತಮ್ಮ ಸಂಸ್ಥಾನವನ್ನು ವಿದ್ಯಾಮೂಲಪೀಠವನ್ನಾಗಿ ಮಾಡಬೇಕೆಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸಿ ತಮ್ಮ ಸಂಸ್ಥಾನವನ್ನು ಸರ್ವತೋಮುಖವಾಗಿ ಮುಂದಕ್ಕೆ ತಂದು ಸಕಲ ಧರ್ಮಗಳು ನಡೆಯುವುದಕ್ಕೆ ಮೂಲಸ್ತಂಭದಂತೆ ಆಧಾರಭೂತರಾಗಿ ಸಕಲ ತೀರ್ಥಯಾತ್ರಾದಿಗಳಿಂದ ಪವಿತ್ರವಾದ ದೇಹವುಳ್ಳವರಾಗಿ ಸಕಲ ವರ್ಣಾಶ್ರಮದವರೂ ಅವರವರ ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮಾಚರಣೆಯನ್ನು ಮಾಡಬೇಕೆಂಬುದಕ್ಕೆ ದೃಷ್ಟಾಂತವಾಗಿ ತಾವು ಸಕಲವಿಧವಾದ ಧರ್ಮಕರ್ಮಾನುಷ್ಠಾನಗಳಿಂದ ತಾವು ರಾಜರ್ಷಿಗಳೆಂದು ಹೊಗಳಿಸಿಕೊಂಡಿರುವುದಲ್ಲದೆ ಧರ್ಮಮೂಲರೆಂದು ಪ್ರಸಿದ್ಧರಾಗಿ ಇನ್ನೂ ಕೆಲವು ಕಾಲ ರಾಜ್ಯಭಾರವನ್ನು ಮಾಡುತ್ತಾ ಮೈಸೂರು ದೇಶವನ್ನು ಇನ್ನೂ ಅಭಿವೃದ್ಧಿಪಡಿಸುತ್ತಾರೆಂದು ನಂಬಿರುವಷ್ಟರಲ್ಲಿಯೇ ರಾಜಸಹೋದರರು ವೈಕುಂಠವಾಸಿಗಳಾದದ್ದು ವಿಷಾದಕರವೇ ಸರಿ. ಆದರೆ ದುಃಖಸ್ಯಾನಂತರಂ ಸುಖಂ ಎಂಬ ನಿಯಮದಂತೆ ತಾವು ರಾಜಕುಮಾರರಾಗಿರುವಾಗಲೆ ಪ್ರಜೆಗಳ ಪ್ರೀತಿಗೆಪಾತ್ರರಾಗಿ ತಮ್ಮ ತಾತಂದಿರು ಸ್ಥಾಪಿಸಿದ ವಿದ್ಯಾ ವೃಕ್ಷದ ಫಲವನ್ನು ಅನುಭವಿಸುವುದಕ್ಕಾಗಿ ತಮ್ಮ ದೊಡ್ಡಪ್ಪನವರಿಂದ ಸ್ಥಾಪಿಸಲ್ಪಟ್ಟ ವಿಶ್ವವಿದ್ಯಾನಿಲಯದಲ್ಲಿ ತಾವು ರಾಜಕುಮಾರರೆಂದು ಭಾವಿಸಿ ಸಿಂಹಾಸನಾಧಿಪತಿಗಳೆಂಬ ಅಹಂಕಾರ ಮಮಕಾರಗಳಿಗೆ ಎಡೆಗೊಡದೆ ಸಾಮಾನ್ಯ ವಿದ್ಯಾರ್ಥಿಗಳ ಸಂಗಡಕೂಡಿಕೊಂಡು ವಿದ್ಯಾವ್ಯಾಸಂಗವನ್ನು ಮಾಡಿ ದಿವ್ಯಜ್ಞಾನವನ್ನು ಸಂಪಾದಿಸಿ ದೇಶಾಟನಾದಿಗಳಿಂದ ರಾಜ್ಯಭಾರ ಕಾರ್ಯನಿರ್ವಾಹಕ ಧುರೀಣತ್ವವನ್ನು ಹೊಂದಿ ತಮ್ಮ ದೊಡ್ಡಪ್ಪನವರಿಂದ ಸಕಲ ಧರ್ಮಕಾರ್ಯಾಚರಣೆಯ ವಿಧಾನವನ್ನು ತಿಳಿದವರಾಗಿ ಸಕಲ ತೀರ್ಥಯಾತ್ರಾಮಾಡುವುದರಲ್ಲಿ ಆಸಕ್ತವಾದ ಮನಸ್ಸುಳ್ಳವರಾಗಿ ಸದ್ಧರ್ಮಪರಾಯಣರಾಗಿ ನಮ್ಮಂತಹ ಅನೇಕ ಮಠಾಧಿಪತಿಗಳಿಗೆ ಮಹದಾಶ್ರಯಭೂತರಾಗಿ ನಮ್ಮ ಮೈಸೂರು ಸಂಸ್ಥಾನದ ರತ್ನಸಿಂಹಾಸನದಲ್ಲಿ ವಿರಾಜಮಾನರಾದ ಶ್ರೀ ಜಯಚಾಮರಾಜೇಂದ್ರ ಪ್ರಭುಗಳವರು ತಮ್ಮ ಸಂಸ್ಥಾನದ ಪ್ರಜೆಗಳ ಅತ್ಯಂತ ಪ್ರೀತಿಗೆ ಪಾತ್ರರಾಗಿರುವುದನ್ನೂ ಪ್ರಭುಗಳವರು ಯಶಸ್ವಿಯಾಗಿ ರಾಜ್ಯಭಾರಮಾಡುತ್ತಿರುವುದನ್ನು ಪ್ರಭುಗಳಿಗೆ ಹರಿಗುರುಗಳಲ್ಲಿರತಕ್ಕ ಭಕ್ತಿವಿಶೇಷವನ್ನೂ ನೋಡಿ ಪರಮಾನಂದಭರಿತರಾಗಿರುವ ಶ್ರೀಗುರುರಾಘವೇಂದ್ರರು ತಮ್ಮಲ್ಲಿ ಪೂರ್ಣಾನುಗ್ರಹ ಮಾಡಬೇಕೆಂದು ತಮ್ಮನ್ನು ಇಲ್ಲಿಗೆ ಬರಮಾಡಿಕೊಂಡಿರುವ ಈ ಸುಸಮಯದಲ್ಲಿ ಶ್ರೀಗುರುರಾಜರವರ ಪ್ರೇರಣಾನುಸಾರವಾಗಿ ಮಹಾಪ್ರಭುಗಳವರಿಗೆ 'ಸದ್ಧರ್ಮಾಶ್ರಯ' ಎಂಬ ಮಹಾಪ್ರಶಸ್ತಿಯನ್ನು ಅನುಗ್ರಹಿಸುತ್ತೇವೆ ಎಂಬ ವಿಚಾರವನ್ನು ತಿಳಿಸಲು ಅತ್ಯಂತ ಹರ್ಷ ಉಳ್ಳವರಾಗಿದ್ದೇವೆ.

ಶ್ರೀಗುರುಸಾರ್ವಭೌಮರು ನಮ್ಮ ಪ್ರಭುಗಳವರನ್ನು ಈ ದಿವಸವೇ ಇಲ್ಲಿಗೆ ಬರಮಾಡಿಕೊಂಡಿರುವುದಕ್ಕೆ ಕಾರಣವೇನೆಂಬುದನ್ನು ನಾವು ಆಲೋಚಿಸಲಾಗಿ ಇದಕ್ಕೆ ಮೂರು ಕಾರಣಗಳಿರಬಹುದೆಂದು ನಾವು ಊಹಿಸುತ್ತೇವೆ. ನಮ್ಮ ಶ್ರೀಗುರುಸಾರ್ವಭೌಮರವರು ಆಶ್ರಮ ಸ್ವೀಕಾರಮಾಡಿದ್ದುದೂ ಮತ್ತು ಬೃಂದಾವನ ಪ್ರವೇಶಮಾಡಿದ್ದುದೂ ಗುರುವಾರವಿದ್ದು ಈ ದಿವಸವೂ ಗುರುವಾರವಾಗಿರುವುದರಿಂದಲೂ ಮತ್ತು ಈ ದಿವಸವು ನಮ್ಮ ಗುರುಸಾರ್ವಭೌಮರವರು ವೇದಾಂತ ವಿದ್ಯಾಸಿಂಹಾಸನದಲ್ಲಿ ಪಟ್ಟಾಭಿಷಿಕ್ತರಾದ ದಿನವಾದ್ದರಿಂದಲೂ ಶ್ರೀಗುರುಗಳು ಪಟ್ಟಾಭಿಷಿಕ್ತರಾದಮೇಲೆ ನಲವತ್ತೆರಡು ವರ್ಷಗಳು ಸಂಸ್ಥಾನವನ್ನಾಳಿ ರಜತೋತ್ಸವ ಸುವರ್ಣೋತ್ಸವವನ್ನು ನಡೆಸಿಕೊಂಡಿರುವುದರಿಂದ ನಮ್ಮ ಪ್ರಭುಗಳವರು ಪಟ್ಟಾಭಿಷಿಕ್ತರಾದ ಎರಡನೆ ವರ್ಷವೇ ಇಲ್ಲಿಗೆ ಬಂದಿರುವುದರಿಂದ ನಮ್ಮ ಗುರುಸಾರ್ವಭೌಮರಂತೆ ಪ್ರಭುಗಳವರೂ ಸಹ ರಜತೋತ್ಸವ

ಸುವರ್ಣೋತ್ಸವ ವಜ್ರೋತ್ಸವಾದಿಗಳನ್ನು ನಡೆಸಿಕೊಂಡು ಧರ್ಮದಿಂದ ರಾಜ್ಯಪರಿಪಾಲನಮಾಡಿಕೊಂಡು ಬರಲಿಯೆಂದು ಹರಸುವುದು ಒಂದು ಕಾರಣ. ನಮ್ಮ ಪ್ರಭುಗಳವರಂತೆ ರಜತೋತ್ಸವ ಸುವರ್ಣೋತ್ಸವಾದಿಗಳನ್ನು ನಡೆಸಿಕೊಳ್ಳತಕ್ಕ ದೀರ್ಘಾಯುಷ್ಮಂತರಾದ ಮತ್ತು ಯೋಗ್ಯರಾದ ಯುವರಾಜರು ತಮ್ಮ ಉದರದಲ್ಲಿ ಜನಿಸಲು ಅನುಗ್ರಹಿಸುವುದು ಎರಡನೇ ಕಾರಣ.

ಮೂರನೆಯದಾಗಿ ನಮ್ಮ ಜಯಚಾಮರಾಜ ಪ್ರಭುಗಳವರು ಗರ್ಭಗತವಾಗಿರುವಾಗಲೇ ಯಾವ ಬ್ರಿಟಿಷ್ ಚಕ್ರವರ್ತಿಗಳು ಯುದ್ಧದಲ್ಲಿ ವಿಜಯವನ್ನು ಹೊಂದಿದರೋ ಅಂಥಾ ನಮ್ಮ ಪ್ರಭುಗಳವರು ರತ್ನ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತರಾದಮೇಲೆ ಅಂಥದೇ ಜಯಕ್ಕೆ ಪಟ್ಟಾಭಿಷೇಕವಾದರೆ ವಿಜಯವು ಸ್ವತಃ ಸಿದ್ಧವಾದದ್ದರಿಂದ ನಮ್ಮ ಜಯಚಾಮರಾಜೇಂದ್ರ ಒಡೆಯರಾದಿಯಾಗಿ ಅನೇಕ ರಾಜರು ಕೂಡಿರತಕ್ಕ ನಮ್ಮ ಜಾರ್ಜ್ ಚಕ್ರವರ್ತಿಗಳಿಗೆ ಅತಿ ಜಾಗ್ರತೆಯಾಗಿ ಯುದ್ಧದಲ್ಲಿ ವಿಜಯವುಂಟಾಗಿ ನಮ್ಮ ಪ್ರಭುಗಳವರಂತೆ ಚಕ್ರವರ್ತಿಗಳೂ ಸಹ ರಜತೋತ್ಸವಾದಿಗಳನ್ನು ಮಾಡಿಸಿಕೊಂಡು ಸುಪುತ್ರರಿಂದಯುಕ್ತರಾಗಿ ಬಹುವರ್ಷ ಪ್ರಜಾಪರಿಪಾಲನ ಮಾಡುತ್ತಾ ಸುಖವಾಗಿರಲು ನಮ್ಮ ಪ್ರಭುಗಳವರ ಮೂಲಕವಾಗಿ ಅವರಿಗೆ ಆಶೀರ್ವದಿಸುವುದು ಮೂರನೆಯ ಕಾರಣ. ಈ ಮೂರು ಕಾರಣಗಳಿಂದಲೇ ಶ್ರೀಗುರುರಾಜರು ಈ ದಿವಸಕ್ಕೆ ಸರಿಯಾಗಿ ನಮ್ಮ ಪ್ರಭುಗಳವರನ್ನು ಇಲ್ಲಿಗೆ ಬರಮಾಡಿಕೊಂಡಿರುತ್ತಾರೆಂದು ನಾವು ನಂಬಿರುತ್ತೇವೆ.

ಇಂಥ ನಮ್ಮ ಮಹಾಪ್ರಭುಗಳಾದ ಶ್ರೀ ಜಯಚಾಮರಾಜೇಂದ್ರ ಒಡೆಯರಿಗೆ ಶ್ರೀಗುರುರಾಜ ಸಾರ್ವಭೌಮರವರು ದೀರ್ಘಾಯುರಾರೋಗ್ಯ ಐಶ್ವರ್ಯ ಸತ್ಸಂತಾನಾದಿಗಳನ್ನು ನಮ್ಮಂತಹ ವೈದಿಕ ಸಂಸ್ಥಾನಗಳನ್ನು ಮರ್ಯಾದೆಯಿಂದ ಪಾಲನಮಾಡತಕ್ಕ ಸದ್ಬುದ್ಧಿಯನ್ನೂ ಸಕಲ ಸದ್ಧರ್ಮಕಾರ್ಯಾಚರಣೆಯಲ್ಲಿ ಆಸಕ್ತಿಯನ್ನೂ ನಮ್ಮ ಮೈಸೂರು ಸಂಸ್ಥಾನವನ್ನು ಇತೋಽಪ್ಯತಿಶಯವಾಗಿ ಮುಂದಕ್ಕೆ ತರುವುದರ ಮೂಲಕ ಪ್ರಜಾಪರಿಪಾಲನಾತತ್ಪರರಾಗಿ ರಾಜ್ಯಾಡಳಿತವನ್ನು ಅತ್ಯಂತ ಯಶಸ್ವಿಯಾಗಿ ನಡೆಸತಕ್ಕ ಶಕ್ತಿಯನ್ನೂ ಸಹ ಕೊಟ್ಟು ಕಾಪಾಡಿಕೊಂಡು ಬರಬೇಕಾಗಿ ನಾವು ಮನಃಪೂರ್ವಕವಾಗಿ ಶ್ರೀ ಗುರುಸಾರ್ವಭೌಮರವರ ಪಾದಕಮಲದಲ್ಲಿಯೂ ಮತ್ತು ಅವರ ಉಪಾಸ್ಯ ಮೂರ್ತಿಯಾದ ಶ್ರೀ ಮೂಲರಾಮಚಂದ್ರ ದೇವರಲ್ಲಿಯೂ, ಪ್ರಾರ್ಥನಾಮಾಡಿರುವ ವಿಷಯವನ್ನು ನಮ್ಮ ಪ್ರಭುಗಳವರಿಗೆ ಅತ್ಯಂತ ಸಂತೋಷದಿಂದ ತಿಳಿಸಿ ಆಶೀರ್ವಾದ ಮಾಡುತ್ತೇವೆ.

ಮಹಾಪ್ರಭುಗಳವರು ಶ್ರೀಗಳವರು ಹೇಳುವುದನ್ನು ಕೈಮುಗಿದುಕೊಂಡು ಭಕ್ತಿಯಿಂದ ಆಲಿಸುತ್ತಿದ್ದು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದ್ದಲ್ಲದೆ ಪುನಃಪುನಃ ತಮಗಾದ ಆನಂದವನ್ನು ಶ್ರೀ ಶ್ರೀಗಳವರಲ್ಲಿ ಅರಿಕೆ ಮಾಡಿಕೊಂಡರು. ತರುವಾಯ ಶ್ರೀಪಾದಂಗಳವರು ಮಹಾರಾಜರವರೊಡನೆ ಶ್ರೀಮದ್ವಾದೀಂದ್ರ ಯತಿರಾಜರ ಬೃಂದಾವನದೆಡೆಗೆ ದಯಮಾಡಿಸಿ ಅಲ್ಲಿ ಶ್ರೀ ಮಹಾಪ್ರಭುಗಳವರ ಅಮೃತಹಸ್ತದಿಂದ ಮಂಗಳಾರತಿ ಮಾಡಿಸಿ ಫಲಮಂತ್ರಾಕ್ಷತಾ ಅನುಗ್ರಹಿಸಿದರು. ತರುವಾಯ ಶ್ರೀಸುಧರ್ಮೇಂದ್ರತೀರ್ಥ ಶ್ರೀಪಾದಂಗಳವರು ಹಾಗೂ ಶ್ರೀಮತ್ಸುವ್ರತೀಂದ್ರತೀರ್ಥ ಪೂಜ್ಯಪಾದಂಗಳವರ ಬೃಂದಾವನಗಳ ಸನ್ನಿಧಿಯಲ್ಲೂ ಮಂಗಳಾರತಿ ನೆರವೇರಿಸಿ ಫಲಮಂತ್ರಾಕ್ಷತೆಯನ್ನು ಕೊಟ್ಟು ಅಲ್ಲಿಂದ ಪ್ರಭುಗಳವರೊಡನೆ ವ್ಯಾಸಮಂಟಪಕ್ಕೆ ಬಿಜಯಂಗೈದು ಆಸನದಲ್ಲಿ ಮಂಡಿಸಿ ಚಿತ್ರಾಸನದಲ್ಲಿ ಮಂಡಿಸಲು ಪ್ರಭುಗಳವರಿಗೆ ಹಸ್ತಪ್ರಸಾರಣ ಮಾಡಿದರು.

ಮಹಾಪ್ರಭುಗಳವರು ಶ್ರೀ ಶ್ರೀಪಾದಂಗಳವರಿಗೆ ಭಕ್ತಿಪೂರ್ವಕವಾಗಿ ಅನೇಕ ಮರ್ಯಾದೆಯನ್ನೂ ಖಿಲ್ಲತ್ತುಗಳನ್ನೂ ಸಮರ್ಪಿಸಿ ವಂದಿಸಿದರು. ಶ್ರೀ ಶ್ರೀಗಳವರು ಪ್ರಭುಗಳವರಿಗೆ ಶುಭಾಶಂಸನರೂಪವಾದ ಭಾಷಣಮಾಡಿ ಅರ್ಥಸಹಿತವಾಗಿ "ನವರತ್ನಮಾಲಿಕೆ"ಯನ್ನು ವಾಚಿಸಿ ರಜತ ಕರಂಡದಲ್ಲಿ ಅದನ್ನಿಟ್ಟು ಪ್ರಭುಗಳವರಿಗೆ ಅದನ್ನು ಅನುಗ್ರಹಿಸಿದರು.

# ಶ್ರೀಮಜ್ಜಯಚಾಮರಾಜೇಂದ್ರ ಶುಭಾಶಂಸನ ನವರತ್ನಮಾಲಿಕಾ

ಶ್ರೀ ವರ್ಮಾ ಬ್ರಹ್ಮಾರ್ಚಿತಾಂಘ್ರೀ ರಘುಮುಖನೃಪತಿ ಪ್ರಾರ್ಚ್ಯಪಾದಾಂಬುಜ **ಶ್ರೀ**
ರಾ **ಮ** ಕ್ಷ್ಮಾಪಾಲಕೇನಾಪ್ಯುಪಚರಿತತಯಾ ಮೂಲರಾಮೇತಿ **ಮ** ಹ್ಯಾಂ |
ಧೀಮ **ಜ್ಜ** ನ್ಮಿಸ್ತುತೋಯೋಽನಿಲತನುವಿನತೋ ರಕ್ಷಕಃ ಸ **ಜ್ಜ** ನಾನಾಂ
ಭೂಯಃ ಶ್ರೀ **ಯ** ಸ್ಸದಿಶ್ಯಾದ್ಧರಿರಿಹ ನೃಪ! ತೇ ರಾಜಸೇ **ಯ** ತ್ಕಟಾಕ್ಷಾತ್ ||೧||

ಮಧ್ವಾಭ್ಯರ್ಚಿತ **ಚಾ** ರುದಿಗ್ವಿಜಯವಾನ್ ವೇದ ಪ್ರ **ಚಾ** ರಪ್ರಿಯಃ
ಶ್ರೀರಾಮೋ ಜಯ ರಾ **ಮ** ಮೂರ್ತಿರಪಿಸಾ ನಿಷ್ಕಾ **ಮ** ಚಿತ್ತೇತವ |
ಟೀಕಾ ಚಾ ರ್ಯ ಸುಧೀ ಕ **ರಾ** ರ್ಚಿತ ಪದಾ **ರಾ** ಜನ್! ನೃಸಿಂಹಾದಯೋ
ರಾಜಂತಾಂ ಯತಏವ ಸರ್ವ **ಜ** ಗ ತಾಂ **ಜ** ನ್ಮಾದಿ ಸಂಪದ್ಯತೇ ||೨||

ವಿಶ್ವಂ ಸತ್ಯಮಿದಂ ಹರಿಃ ಪರತರೋ ವಿ **ಪ್ರ** **ಪ್ರ** ಮೇಯಃ ಸದಾ
ಭಿನ್ನೈರ್ಜೀವಗಣೈಃ ಹರೇರನುಚರೈಃ **ಭೋ** ಜ್ಯಂ ಸ್ವಕರ್ಮಾಖಿಲಂ |
ನಿರ್ದೋಷಃ ಸುಖಸಂವಿದಾತ್ಮಕ ತನುಃ ವೇದೈಕ ವೇದ್ಯೋ ಹರಿಃ
ಮುಕ್ತಿಃ ನೈಜಸುಖಾನುಭೂತಿರಮ್ಮಸ್ನೇಹೈಃ ದೃಢೈಃ ಪ್ರಾಪ್ಯತೇ ||೩||

ಇತ್ಯಾದ್ಯೈಶ್ಚೈಃ ನಿಗಮಕಥಿತೈಃ ತತ್ವರತ್ನೈರ್ಜನಾನಾಂ
ಹೃತ್ವಾಮೋಹಂ ಹರಿಪದದೃಶಂ ಯೋ ದದಾತ್ಯಾದರೇಣ |
ಸ ಪ್ರಾಣೇಶೋ ದಿಶತು ಹನುಮದ್ಭೀಮ ಮಧ್ವಾವತಾರೋ
ಭಕ್ತಿಂ, ಶಕ್ತಿಂ, ಶುಭತಮಮತಿಂ ತೇ ಚಿರಂಜೀವಿತಾಂ ಚ ||೪||

ಯಃ ಪ್ರಹ್ಲಾದೋ ಮಹಾತ್ಮಾ ನರಹರಿಭಜನೇ ತೃಪ್ತಿಮಪ್ರಾಪ್ಯಭೂಯೋ
ಭೂಮೌ ಬಾಹ್ಲೀಕನಾಮಾ ಯದುಪತಿಮಪಿತಂ ಕೃಷ್ಣಮೂರ್ತಿಂ ಸಿಷೇವೇ |
ಸತ್ಸಿದ್ಧಾಂತ ಪ್ರಸಿದ್ಧ್ಯೈಭುವಿಪುನರಭವದ್ವ್ಯಾಸರಾಜೋ ಯತೀಂದ್ರೋ
ಯೋಽಸೌ ಶ್ರೀರಾಘವೇಂದ್ರೋವಿಲಸತಿ ಗುರುರಾಣ್ಮೂಲರಾಮಂ ಸಮರ್ಚನ್ ||೫||

ಸೀತಾಜಾನೇಶ್ಚರಣ ನಲಿನಸ್ಪರ್ಶಪೂತಾಶ್ಮ ಖಂಡೈಃ
ಶ್ರೀಪ್ರಹ್ಲಾದ ಪ್ರಭುಕೃತ ಮಹಾವೇದಿದೇಶೈಶ್ಚ ಪುಣ್ಯೈಃ |
ಗಂಗಾತುಲ್ಯ ಪ್ರಚುರ ಮಹಿಮೋತ್ತುಂಗ ತುಂಗಾತರಂಗೈಃ
ಕ್ಷೇತ್ರಂ "**ಮನ್ತ್ರಾಲಯ**" ಇತಿ ಭುವಿ ಖ್ಯಾತಮೇತದ್ವಿಭಾತಿ ||೬||

ಕುರ್ಯಾತ್ತ್ವಾಂ ನರಸಿಂಹಪುತ್ರ! ನೃಹರಿರ್ಭಕ್ತಂ ನೃಸಿಂಹಂ ಸದಾ
ಶ್ರೀರಾಮೋ ನಿಜ ಮಹೀಂ ಪುಷ್ಣಾತು ಭೋಯಾದವ! |
ದದ್ಯಾತ್ತೇ ಶುಭಸಂತತಿಂ ಯದುಪತಿಸ್ಸಂತಾನಕೃಷ್ಣೋಽನಿಶಂ
ವಿಷ್ಣುರ್ವ್ಯಾಸವಪುರ್ದಿಶೇಚ್ಚ ಸುದೃಶಂ ಶ್ರೀರಾಘವೇಂದ್ರಾರ್ಚಿತಃ ||೭||

ಪೃಥ್ವೀಂ ಶ್ರೀಜಯಚಾಮರಾಜ ನೃಪರಾಟ್! ಶ್ರೀಚಾಮರಾಜಃ ಪುರಾ
ಕೃಷ್ಣಾಖ್ಯಶ್ಚ ನರಾಧಿಪಸ್ತವಪಿತಾ ಕಂಠೀರವಾಖ್ಯೋಯಥಾ |
ಪ್ರೀತ್ಯಾಽರಕ್ಷದಿಮಾಂ ತಥಾ ಜನಹಿತಂ ತ್ವಾಂ ಶಾಸತಂ ಸಾನುಗಂ
ಕ್ಷೇಮಸ್ಥೈರ್ಯ ಸುಖಾದಿದೌ ಸಮವತಾಂ ಶ್ರೀರಾಘವೇಂದ್ರಾ ಸದಾ ||೮||

ಯತ್ತ್ವಂ ಶ್ರೀಜಯಚಾಮರಾಜವಸುಧಾನಾಥೇಂದ್ರ! ವಿಜ್ಞಾನವಾನ್
ನಾಸ್ತ್ಯನ್ಯೈರನುಶಾಸನೀಯಮತ ಏವಾಶಾಸ್ಮಹೇ ಸಾಂಪ್ರತಂ|
ದೇವಾನ್ಪೂಜಯ, ತೋಷಯದ್ವಿಜಗಣಾನಾನಂದಯಸ್ವಾನ್ ಜನಾನ್
ಜಿತ್ವಾವೈರಿಗಣಾಂಶ್ಚಿರಂ ಭುವಮಿಮಾಂ ಧರ್ಮೇಣ ಪಾಹಿ ಪ್ರಭೋ

**ಚೆಲ್ವಾಂಬಾ ಗರ್ಭಸಂಭೂತೋ ರತ್ನಸಿಂಹಾಸನಸ್ಥಿತಃ**
**ನೃಸಿಂಹರಾಜತನಯೋಜೀಯಾತ್ ಶ್ರೀಜಯಚಾಮರಾಟ್ ॥**

ಪ್ರಭುಗಳವರೇ! ಚತುರ್ಮುಖ ಬ್ರಹ್ಮದೇವರಿಂದ, ಮತ್ತು ರಘುಕುಲಪರಂಪರಾಗತ ಶ್ರೀರಾಮಚಂದ್ರ ದೇವರಿಂದಲೂ ಪೂಜಿತವಾದ ಪಾದಾರವಿಂದ ಉಳ್ಳವನಾದ ಕಾರಣವೇ ಶ್ರೀಮೂಲರಾಮನೆಂದು ಪ್ರಖ್ಯಾತನಾಗಿರುವ, ಜ್ಞಾನಿಶ್ರೇಷ್ಠರಾದ ಶ್ರೀವಾಯುದೇವರ ಅವತಾರಗಳಿಂದ ಪೂಜಿತನಾಗಿರುವ ಮತ್ತು ಸಜ್ಜನಪರಿಪಾಲಕನಾದ ಯಾವ ದೇವದೇವನ ಕಟಾಕ್ಷದಿಂದ ತಾವು ಪ್ರಕಾಶಿಸುತ್ತಲಿರುವಿರೋ ಆ ಶ್ರೀಮೂಲರಾಮಚಂದ್ರ ದೇವರು ತಮಗೆ ಇತೋಽಪ್ಯತಿಶಯವಾದ ಶ್ರೇಯಸ್ಸನ್ನುಂಟುಮಾಡಲಿ.

ಶ್ರೀಮನ್ಮಧ್ವಾಚಾರ್ಯರವರಿಂದ ಪೂಜಿತನಾದ, ವೇದೈಕಗಮ್ಯನಾದ ಶ್ರೀದಿಗ್ವಿಜಯ ರಾಮಚಂದ್ರ ದೇವರು ಶ್ರೀಟೀಕಾಕೃತ್ಪಾದರವರಿಂದ ಪೂಜಿತವಾದ ಪಾದಾರವಿಂದವುಳ್ಳ ಶ್ರೀಜಯರಾಮಚಂದ್ರ ದೇವರೂ, ಮತ್ತೂ ಜಗದುತ್ಪತ್ತ್ಯಾದಿಗಳಿಗೆ ಕಾರಣವಾದ ಶ್ರೀನೃಸಿಂಹಾದ್ಯವತಾರಗಳನ್ನು ತಾಳಿರುವ ಶ್ರೀಹರಿಯೂ ಸಹ ಕಾಮನಾದಿ ದೋಷಗಳಿಲ್ಲದ ನಿರ್ಮಲವಾದ ತಮ್ಮ ಮನಸ್ಸನ್ನು ಉಜ್ಜ್ವಲಗೊಳಿಸಲಿ.

ಪ್ರಪಂಚವಿದು ಸತ್ಯವು. ಜ್ಞಾನಿಗೋಚರನಾದ ಶ್ರೀಹರಿಯು ಸರ್ವೋತ್ತಮನು. ಶ್ರೀಹರಿಯ ಕಿಂಕರರಾಗಿ ಪರಸ್ಪರಭೇದಗಳನ್ನು ಹೊಂದಿರುವ ಜೀವರುಗಳ ಸಮೂಹವು ಸ್ವಕರ್ಮಾನುಸಾರವಾಗಿ ಫಲವನ್ನು ಪಭೋಗಿಸತಕ್ಕದ್ದು. ವೇದಾದಿಗಳಿಂದ ಮುಖ್ಯಪ್ರತಿಪಾದ್ಯನಾದ ಶ್ರೀಹರಿಯು ದೋಷದೂರನು ಮತ್ತು ಜ್ಞಾನಾನಂದ ಸ್ವರೂಪಿಯು ಸ್ವರೂಪಾನಂದಾನುಭವವೇ ಮುಕ್ತಿಯು. ಅದು ದೃಢವಾದ ಭಕ್ತಿಮಾರ್ಗದಿಂದಲೇ ಲಭ್ಯವು.

ಇತ್ಯಾದಿ ಸಿದ್ಧಾಂತಗಳಾದ ಮತ್ತು ವೇದಸಮ್ಮತಗಳಾದ ಪರಮತತ್ವಗಳಿಂದ ಅಜ್ಞಾನವನ್ನು ಪರಿಹರಿಸಿ ಜನರಿಗೆ ಶ್ರೀಹರಿಪಾದಗಳಲ್ಲಿ ಭಕ್ತಿಯನ್ನು ಆದರದಿಂದ ಕೊಡುವವರಾದ ಶ್ರೀಮದ್ಹನುಮ-ಭೀಮ-ಮಧ್ವಾಚಾರ್ಯರೆಂಬ ಅವತಾರತ್ರಯವುಳ್ಳವರಾದ ಶ್ರೀ ವಾಯುದೇವರು ತಮಗೆ ಭಕ್ತಿ-ಬಲ-ಸುಜ್ಞಾನಗಳನ್ನು ಕರುಣಿಸುವುದರೊಡನೆ ದೀರ್ಘಾಯುಷ್ಯವನ್ನು ಅನುಗ್ರಹಿಸಲಿ.

ಯಾವ ಮಹಾತ್ಮರಿಂದ ಶ್ರೀಪ್ರಹ್ಲಾದರಾಜರು ಶ್ರೀನೃಸಿಂಹರೂಪೀ ಪರಮಾತ್ಮನ ಸೇವೆಮಾತ್ರದಿಂದಲೇ ತೃಪ್ತರಾಗದೆ ಭೂಲೋಕದಲ್ಲಿ ಬಾಹ್ಲೀಕರಾಜರಾಗಿ ಅವತರಿಸಿ ಯದುಕುಲೋತ್ತಂಸನಾದ ಶ್ರೀಕೃಷ್ಣರೂಪೀ ಪರಮಾತ್ಮನನ್ನು ಸೇವಿಸಿದರೋ ಮತ್ತು ಸತ್ಸಿದ್ಧಾಂತವಾದ ದ್ವೈತಮತವನ್ನುದ್ಧರಿಸಲು ಶ್ರೀವ್ಯಾಸಯೋಗಿಗಳಾಗಿ ಅವತರಿಸಿದರೋ ಅಂಥಾ ಶ್ರೀಪ್ರಹ್ಲಾದರಾಜರು ಶ್ರೀಮನ್ಮೂಲರಾಮ ಪಾದಪದ್ಮಾರಾಧಕರಾಗಿ ಶ್ರೀರಾಘವೇಂದ್ರ ಸ್ವಾಮಿಗಳವರೆಂಬ ಅಭಿಧಾನವುಳ್ಳವರಾಗಿ ಪ್ರಕಾಶಿಸುತ್ತಲಿದ್ದಾರೆ.

ಈ ಮಹಾಕ್ಷೇತ್ರವು ಶ್ರೀರಾಮಚಂದ್ರದೇವರ ಪಾದ ಕಮಲಸ್ಪರ್ಶದಿಂದ ಪಾವಿತಗಳಾದ ಶಿಲಾಶಕಲಗಳನ್ನುಳ್ಳದ್ದಾಗಿಯೂ ಶ್ರೀಪ್ರಹ್ಲಾದರಾಜರ ಯಜ್ಞವೇದಿಕೆಗಳಿಂದ ಪವಿತ್ರತವಾದ ಪ್ರದೇಶವುಳ್ಳದ್ದಾಗಿಯೂ ಗಂಗಾಸದೃಶವಾದ ಮಹಿಮೆಯುಳ್ಳ ಉನ್ನತವಾದ ತುಂಗಾನದಿಯ ಅಲೆಗಳಿಂದ ಕೂಡಿಯೂ ಇರುವ ಜಗತ್ಪ್ರಸಿದ್ಧವಾದ "ಶ್ರೀಮನ್ಮಂತ್ರಾಲಯ"ವೆಂಬ ಅಭಿಧಾನದಿಂದ ಶೋಭಿತವಾಗಿದೆ.

ಇಲ್ಲಿ ಶ್ರೀಪ್ರಹ್ಲಾದರ ಅವತಾರಗಳಿಂದ ಪೂಜಿತನಾದ ಶ್ರೀನೃಸಿಂಹ, ಶ್ರೀರಾಮ, ಶ್ರೀಸಂತಾನಕೃಷ್ಣ ಮತ್ತು ಶ್ರೀವೇದವ್ಯಾಸರೂಪಗಳಿಂದ ಶೋಭಿತನಾದ ಶ್ರೀಹರಿಯು ತನ್ನ ಅವತಾರ ನಾಮಗಳಿಗನುಸಾರವಾಗಿ ಕೀರ್ತಿಶೇಷರಾದ ಶ್ರೀನೃಸಿಂಹರಾಜ ಪ್ರಭುಗಳವರ ಸುಕುಮಾರರಾದ ತಮ್ಮನ್ನು ನರಸಿಂಹರೂಪಿಯಾದ ಶ್ರೀಹರಿಯು ನರಸಿಂಹರನ್ನಾಗಿ ಅಂದರೇ ಪುರುಷಶ್ರೇಷ್ಠರನ್ನಾಗಿ ಮಾಡಲಿ. ಶ್ರೀರಾಮರೂಪಿಯಾದ ಶ್ರೀಹರಿಯು ನಿಮ್ಮ ರಾಜ್ಯವನ್ನು ರಾಮರಾಜ್ಯವನ್ನಾಗಿ ಮಾಡಲಿ. ಯದುಕುಲಾಗ್ರಣಿಯಾದ ಶ್ರೀಸಂತಾನ ಕೃಷ್ಣರೂಪಿಯಾದ ಶ್ರೀಹರಿಯು ಯದುವಂಶ ಸಂಜಾತರಾದ ತಮಗೆ ಸತ್ಸಂತಾನವನ್ನನುಗ್ರಹಿಸಲಿ ಮತ್ತು ತತ್ವಜ್ಞಾನಕ್ಕೆ ಮುಖ್ಯ ಸಾಧನವಾದ ವೇದೋದ್ಧಾರಕ್ಕಾಗಿ ಅವತರಿಸಿ ಶ್ರೀಗುರುಸಾರ್ವಭೌಮರಿಂದ ಪೂಜಿತನಾಗಿರುವ ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯು ನಿಮಗೆ ನಿರ್ಮಲವಾದ ತತ್ವಜ್ಞಾನವನ್ನು ಅನುಗ್ರಹಿಸಲಿ.

ನಿಮ್ಮ ಪೂರ್ವಿಕರುಗಳಾದ, ಆಳಿದ ಶ್ರೀಚಾಮರಾಜೇಂದ್ರ ಪ್ರಭುಗಳು, ಆಳಿದ ಶ್ರೀಕೃಷ್ಣರಾಜಪ್ರಭುಗಳು ಮತ್ತು ತಮ್ಮ ಜನಕರಾದ ಕೀರ್ತಿಶೇಷರಾದ ಶ್ರೀಕಂಠೀರವ ನರಸಿಂಹರಾಜ ಪ್ರಭುಗಳೂ ಸಹ ಯಾವರೀತಿ ಪ್ರಜಾವಾತ್ಸಲ್ಯದಿಂದ ರಾಜ್ಯವನ್ನು ಪರಿಪಾಲಿಸಿದರೋ ಅದೇರೀತಿ ಪ್ರಜೆಗಳನ್ನು ಪ್ರೀತ್ಯಾದರಗಳಿಂದ ರಕ್ಷಿಸಿ ರಾಜ್ಯಪರಿಪಾಲನೆ ಮಾಡುತ್ತಲಿರುವ ತಮಗೆ ರಘುಕುಲೋತ್ತಂಸನಾದ ಕಾರಣವೇ "ಶ್ರೀರಾಘವೇಂದ್ರ"ನೆಂಬ ಅಭಿಧಾನವನ್ನು ಪಡೆದಿರುವ ಶ್ರೀರಾಮಚಂದ್ರದೇವರು ಮತ್ತು "ಶ್ರೀರಾಘವೇಂದ್ರ"ರೆಂದು ಪ್ರಖ್ಯಾತರಾಗಿರುವ ಶ್ರೀಗುರುಸಾರ್ವಭೌಮರೂ ಸಹ ಕ್ಷೇಮ, ಸ್ಥೈರ್ಯ, ಸುಖಾದಿಗಳನ್ನು ಅಭಿವೃದ್ಧಿಗೊಳಿಸಿ ರಕ್ಷಿಸಲಿ

ವಿಚಕ್ಷಣರಾದ ಶ್ರೀಮಜ್ಜಯಚಾಮರಾಜೇಂದ್ರರೆಂಬ ಶುಭನಾಮವುಳ್ಳ ಪ್ರಭುಗಳವರೆ! ದೇವಪೂಜಾ ನಿರತರಾದ ಬ್ರಾಹ್ಮಣಸಂರಕ್ಷಕರಾದ ಸ್ವಜನರಿಗಾನಂದದಾಯಕರಾದ ವೈರಿಸಮೂಹನಾಶಕರಾದ ಧರ್ಮ ಪ್ರಭುಗಳಾದ ತಮ್ಮಿಂದಲೇ ಈ ರಾಜ್ಯವು ಚಿರಕಾಲವೂ ಪರಿಪಾಲಿಸಲ್ಪಡುತ್ತಲಿರಬೇಕೆಂಬುದೇ ನಮ್ಮ ಶುಭಾಶಾಸನವು.

ಕೀರ್ತಿಶೇಷರಾದ ಶ್ರೀಕಂಠೀರವ ನರಸಿಂಹರಾಜ ಪ್ರಭುಗಳವರ ಸುಕುಮಾರಕರಾಗಿ ಚೆಲುವಾಂಬಾಗರ್ಭ ಸಂಭೂತರಾಗಿರುವ ಶ್ರೀಮತ್ಕರ್ಣಾಟಕರತ್ನಸಿಂಹಾಸನಾರೂಢರಾಗಿರುವ ಶ್ರೀಮಜ್ಜಯಚಾಮರಾಜೇಂದ್ರ ಸಾರ್ವಭೌಮರಿಗೆ ಅಭ್ಯುದಯವಾಗಲಿ.

ಇದಾದನಂತರ ಮಹಾಪ್ರಭುಗಳವರು ಶುಭಾಶಂಸನವನ್ನು ಆಲಿಸಿ ಆನಂದತುಂದಿಲಾಂತಃಕರಣರಾಗಿ ಭಕ್ತಿಯಿಂದ ವಂದಿಸಿ ತಮ್ಮ ಆನಂದವನ್ನು ವ್ಯಕ್ತಪಡಿಸಿ ಶ್ರೀಗಳವರ ಶುಭಾಶಂಸನವನ್ನು ಶಿರಸಾಗ್ರಹಿಸಿದ್ದೇನೆಂದು ಅಪ್ಪಣೆಕೊಡಿಸಿದರು. ತರುವಾಯ ಶ್ರೀ ಶ್ರೀಪಾದಂಗಳವರು ಮಹಾಪ್ರಭುಗಳವರಿಗೂ ರಾಜಪರಿವಾರದವರಿಗೂ ಶ್ರೇಯಃಪ್ರಾರ್ಥನಾಮಾಡಿ ಶ್ರೀಮೂಲರಾಮದೇವರ ತೀರ್ಥಪ್ರಸಾದ ಫಲಗಂಧ ಮಂತ್ರಾಕ್ಷತೆ ಶ್ರೀಗುರುರಾಜರ ಪಾದೋದಕಾದಿಗಳನ್ನು ರಾಜಖಿಲ್ಲತ್ತುಗಳನ್ನೂ ಅನುಗ್ರಹಿಸಿ ಪ್ರಭುಗಳವರು ಶ್ರೀಗುರು ಪ್ರಸಾದವನ್ನು ಸ್ವೀಕರಿಸಲು ಅಪ್ಪಣೆಕೊಟ್ಟರು. ಶ್ರೀಮಠದ ಸರ್ವಾಧಿಕಾರಿಗಳವರು ಮಹಾಪ್ರಭುಗಳವರಿಗೆ ಮಾರ್ಗಪ್ರದರ್ಶನಮಾಡುತ್ತಾ ಬಿಡಾರಕ್ಕೆ ಕರೆದೊಯ್ದು ಬಿಟ್ಟು ಪ್ರಭುಗಳವರ ಅಪ್ಪಣೆ ಪಡೆದು ಬಂದು ಶ್ರೀ ಶ್ರೀಪಾದಂಗಳವರ ಸನ್ನಿಧಿಯಲ್ಲಿ ಈ ವಿಚಾರವನ್ನು ಅರಿಕೆಮಾಡಿದರು. ನಂತರ ಶ್ರೀಗಳವರು ರಾಜ ಪರಿವಾರದವರಿಗೂ ತೀರ್ಥಪ್ರಸಾದಗಳನ್ನು ಅನುಗ್ರಹಿಸಿದರು.

ನಂತರ ಮಹಾಪ್ರಭುಗಳವರು ಶ್ರೀಗುರುರಾಜರವರ ಮಹಾಪ್ರಸಾದರೂಪವಾದ ದಿವ್ಯವಾದ ಆಹಾರ ವನ್ನು ಸ್ವೀಕರಿಸಿ ಕೆಲಕಾಲ ವಿಶ್ರಾಂತಿಯನ್ನು ತೆಗೆದುಕೊಂಡರು.

ಪ್ರಯಾಣ ಬೆಳೆಸುವ ಮುಂಚೆ ಮತ್ತೊಮ್ಮೆ ಶ್ರೀಮಹಾರಾಜರವರು ಶ್ರೀಗುರುರಾಜರವರ ಸನ್ನಿಧಾನಕ್ಕೆ

ದಯಮಾಡಿಸಿದರು. ಶ್ರೀ ಶ್ರೀಯವರು ಶ್ರೀಗುರುರಾಜರ ಸನ್ನಿಧಾನದಲ್ಲಿ ಶ್ರೀಮನ್ಮಹಾರಾಜರವರಿಗೆ ವಿಶೇಷ ಶ್ರೇಯಃಪ್ರಾರ್ಥನಾಮಾಡಿ ಶ್ರೀಮನ್ಮಹಾಪ್ರಭುಗಳವರಿಗೆ ಶೀಘ್ರವಾಗಿ ಶ್ರೀಮದ್ಯುವರಾಜರವರು ಅವತರಿಸುವಂತೆ ಶ್ರೀಗುರುರಾಜರನ್ನು ಪ್ರಾರ್ಥಿಸಿ ಪ್ರಭುಗಳವರಿಗೆ ದಿಗ್ವಿಜಯ ಫಲಮಂತ್ರಾಕ್ಷತೆಯನ್ನು ಅನುಗ್ರಹಿಸಿದರು. ನಂತರ ಮಹಾಪ್ರಭುಗಳವರ ಆಗಮನದ ಜ್ಞಾಪಕಾರ್ಥವಾಗಿ ಶ್ರೀ ಶ್ರೀಪಾದಂಗಳವರ ಮತ್ತು ಮಹಾಪ್ರಭುಗಳವರ ಸಹಿತವಾಗಿ ಶ್ರೀಗುರುರಾಜರವರ ಭಾವಚಿತ್ರವನ್ನು ತೆಗೆಸಲಾಯಿತು. ನಂತರ ಶ್ರೀಮನ್ಮಹಾರಾಜರವರು ಶ್ರೀ ಶ್ರೀಪಾದಂಗಳವರು ತಮಗೆ ಮಾಡಿದ ಅಗಾಧ ಮರ್ಯಾದೆಗಾಗಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ಶ್ರೀ ಶ್ರೀಗಳವರ ಪರಮಾನುಗ್ರಹವನ್ನೂ ಆಶೀರ್ವಾದವನ್ನೂ ಅಪ್ಪಣೆಯನ್ನೂ ಪಡೆದು ಶ್ರೀದೇವಸ್ಥಾನದ ಮಹಾದ್ವಾರದ ಬಳಿ ಶ್ರೀಪ್ರಭುಗಳವರ ದರ್ಶನಕ್ಕಾಗಿ ಕಾದು ನಿಂತಿದ್ದ ಹತ್ತುಸಹಸ್ರ ಜನರಿಗೆ ಹಸನ್ಮುಖಿಗಳಾಗಿ ಭೇಟೀ ದಯಪಾಲಿಸಿದರು. ಆಗ ಎಲ್ಲೆಲ್ಲಿಯೂ "ಕನ್ನಡನಾಡಿಗೆ ಜಯವಾಗಲೀ" "ಕರ್ನಾಟಕಾಧೀಶರಿಗೆ ವಿಜಯವಾಗಲೀ" "ಶ್ರೀಜಯಚಾಮರಾಜೇಂದ್ರ ಒಡೆಯರ್ ಕೀ ಜೈ" ಮುಂತಾದ ಘೋಷಣೆಗಳೂ ಕರತಾಡನ ಧ್ವನಿಯೂ ಕೇಳಿಬರುತ್ತಿತ್ತು. ನಂತರ ಪ್ರಚಂಡಜಯಧ್ವನಿಗಳೊಡನೆ ಶ್ರೀಮನ್ಮಹಾಪ್ರಭುಗಳವರು ಕಾರಿನಲ್ಲಿ ಕುಳಿತು ಪ್ರಯಾಣಬೆಳೆಸಿದರು.

ಶ್ರೀಮಠದ ಸರ್ವಾಧಿಕಾರಿಗಳೂ ಸಹ ಆದವಾನಿ ರೈಲ್ವೆನಿಲ್ದಾಣದವರೆವಿಗೆ ಪ್ರಭುಗಳವರನ್ನು ಹಿಂಬಾಲಿಸಿ ಅಲ್ಲಿ ಪುನಃ ಮಹಾಪ್ರಭುಗಳವರಿಗೆ ಹಾರಾತುರಾಯಿಗಳನ್ನು ಅರ್ಪಿಸಿ ಮಹಾಪ್ರಭುಗಳವರನ್ನು ಬೀಳ್ಕೊಟ್ಟು, ಅಪ್ಪಣೆಪಡೆದು ಬಂದು ಶ್ರೀ ಶ್ರೀಪಾದಂಗಳವರಲ್ಲಿ ವಿಚಾರವನ್ನು ವಿಜ್ಞಾಪಿಸಿದರು.

ಅದೇ ದಿವ್ಸರಾತ್ರೆ ಶ್ರೀಮಠದ ವಿದ್ವಾಂಸರುಗಳಿಂದ ಉಪನ್ಯಾಸಾದಿಗಳು ನಡೆಯಿತು. ನಂತರ ಶ್ರೀಗುರುರಾಜರವರ ಉತ್ಸವಮೂರ್ತಿಯನ್ನು ದಿವ್ಯವಾಗಿ ಅಲಂಕರಿಸಿ ವಿಜೃಂಭಣೆಯಿಂದ ಉತ್ಸವವನ್ನು ನೆರವೇರಿಸಿ ಶ್ರೀರಾಯರಿಗೆ ದೀಪಾರಾಧನೆ ಮಂಗಳಾಳತೀ ಮುಂತಾದ್ದು ನಡೆದು ಶ್ರೀಮನ್ಮಹಾರಾಜರವರಿಗೆ ಶ್ರೇಯಃಪ್ರಾರ್ಥನೆ ನಡೆಸಲಾಯಿತು. ಶ್ರೀ ಶ್ರೀಪಾದಂಗಳವರು ಈ ಮಹೋತ್ಸವವನ್ನು ನೋಡಲಿಕ್ಕಾಗಿ ಅನೇಕ ಕಡೆಗಳಿಂದ ಬಂದಿದ್ದ ಸಹಸ್ರಾರು ಜನರಿಗೆ ಫಲಮಂತ್ರಾಕ್ಷತೆಯನ್ನು ಅನುಗ್ರಹಿಸಿದರು.

ಮೈಸೂರು ಮಹಾರಾಜರುಗಳ ಪೈಕಿ ಶ್ರೀಜಗದ್ಗುರುಗಳಾದ ಶ್ರೀಗುರುರಾಘವೇಂದ್ರ ಯತಿಸಾರ್ವಭೌಮರವರ ದರ್ಶನಮಾಡಿ ಕೃತಾರ್ಥರಾದವರೆಂದರೆ ನಮ್ಮ ಆಳರಸರಾದ ಶ್ರೀಮನ್ಮಹಾರಾಜಾ ಜಯಚಾಮರಾಜೇಂದ್ರ ಸಾರ್ವಭೌಮರವರೇ ಮೊದಲಿಗರು. ಈ ಘಟನೆಯು ಕರ್ನಾಟಕದ ಇತಿಹಾಸದಲ್ಲೂ ಮಠದ ಇತಿಹಾಸದಲ್ಲೂ ಸ್ವರ್ಣಾಕ್ಷರಗಳಿಂದ ಬರೆದಿಡುವ ಅಂಶವಾಗಿದೆ ಎಂದರೆ ಅಚ್ಚರಿಯಲ್ಲ.

ಮಹಾಮಹಿಮರಾದ ಶ್ರೀಗುರುರಾಜರವರ ದರ್ಶನದಿಂದ ಕೃತಾರ್ಥರಾದ ಶ್ರೀಮತ್ಕರ್ನಾಟಕ ರತ್ನಸಿಂಹಾಸನಾಧೀಶ್ವರರಾದ ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ. ಜಿ. ರವರು ನಮ್ಮ ಶ್ರೀಪಾದಂಗಳವರು ಅನುಗ್ರಹಿಸಿರುವ "ಸದ್ಧರ್ಮಾಶ್ರಯ" ಎಂಬ ಮಹಾಬಿರುದಿನಿಂದ ಸ್ವತಂತ್ರ ಭಾರತದಲ್ಲಿ ಬಹುಕಾಲ ಧರ್ಮದಿಂದ ರಾಜ್ಯಪರಿಪಾಲನಮಾಡಿಕೊಂಡು ಶ್ರೀಗುರುರಾಜರ ಅನುಗ್ರಹದಿಂದ ಶೀಘ್ರವಾಗಿ ಶ್ರೀಯುವರಾಜರವರನ್ನು ಪಡೆದು ಶ್ರೀಕೃಷ್ಣರಾಜ ಪ್ರಭುಗಳವರಂತೆ "ರಾಜರ್ಷಿ" ಗಳೆಂದು ಖ್ಯಾತರಾಗಿ ಸಕಲ ಧರ್ಮವನ್ನೂ ಪಾಲಿಸುತ್ತಾ ರಾಜ್ಯಭಾರ ನಿರ್ವಹಿಸಿಕೊಂಡು ಎಲ್ಲೆಲ್ಲಿಯೂ ಸುಖ, ಶಾಂತಿಗಳು ನೆಲೆಸುವಂತೆಮಾಡಿ ದಿಗಂತ ವಿಶ್ರಾಂತಕೀರ್ತಿಯನ್ನು ಹೊಂದಲೆಂದು ಶ್ರೀಗುರುರಾಜರಲ್ಲಿ ಭಕ್ತಿಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

**ಶ್ರೀಗುರುರಾಜೋ ವಿಜಯತೇತರಾಮ್**

**ಚಿರಮಭಿವರ್ಧತಾಂ ಯದುಸಂತಾನ ಶ್ರೀ**

**ಶುಭಂ ಭೂಯಾತ್**

# ಮಾನವ ಸಂಸ್ಕೃತಿ ಮತ್ತು ದ್ವೈತಸಿದ್ಧಾಂತ

(ಹುಲಿ. ಕೃ. ವೇದವ್ಯಾಸಾಚಾರ್ಯ)

---

ಜಗತ್ತಿನ ಇತಿಹಾಸವನ್ನೊಮ್ಮೆ ಪರಿಲೋಕಿಸಿದರೆ, ಜಗತ್ತಿನ ಶಾಂತಿಗೆ, ಸರ್ವಜನಾಂಗದ ಸೌಹಾರ್ದಕ್ಕೆ ಮನುಷ್ಯ ಈಗ ಹಾತೊರೆಯುತ್ತಿರುವಷ್ಟು ಹಿಂದೆಂದೂ ವ್ಯಗ್ರನಾಗಿರಲಿಲ್ಲವೆನಿಸುತ್ತದೆ. ಮೊದಲನೆಯ ಮಹಾಯುದ್ಧದ ದುಷ್ಪರಿಣಾಮದಿಂದಾಗಿ ಮಿಡುಕಿದ ಮಾನವ ಜನಾಂಗಗಳ ರಾಜ್ಯಘಟಕಗಳನ್ನೊಂದುಗೂಡಿಸಿ ಆ ಮುಖಾಂತರ ಶಾಂತಿ ಸಮಾಧಾನಗಳನ್ನೇರ್ಪಡಿಸಲು ಅಡಿಯಿಟ್ಟ. ಇದರ ಫಲವಾಗಿ ಜನ್ಮತಾಳಿದ ರಾಷ್ಟ್ರಸಂಸ್ಥೆ (League of Nations) ಬಾಲಾರಿಷ್ಟದಿಂದ ಮೃತವಾಯಿತು. ನಂತರವೇ ಅಭೂತಪೂರ್ವವಾದ ಘೋರ 'ದ್ವಿತೀಯ ಮಹಾಯುದ್ಧ' ಪ್ರಾರಂಭವಾಗಿ ಜಗತ್ತನ್ನೆಲ್ಲ ಅಗ್ನಿಕುಂಡದಲ್ಲಿ ಕೆಡವಿತು. ಇದರ ದುರಂತದುಷ್ಫಲಗಳ ಕಹಿ ಇನ್ನೂ ಬಹುದಿನ ಜಗತ್ತಿನ ಅನುಭವಕ್ಕೆ ಬರುವುದಲ್ಲದೆ, ಇದರಿಂದಾದ ಗಾಯದ ಮೇಲೆ ಮತ್ತೆಮತ್ತೆ ಇನ್ನೂ ಘೋರತರವಾದ ಆಘಾತಗಳು ಮಾನವನಿಗೆ ಸಂಭವಿಸಬಹುದು. ಇದನ್ನು ನೆನೆದೊಡನೆ ಮಾನವ ಭಯದಿಂದ ಕಂಪಿಸುತ್ತಾನೆ. ಅದನ್ನು ನಿವಾರಿಸಲು ಮತ್ತೆ ಹೆಣಗುತ್ತಿದ್ದಾನೆ. ಇದಕ್ಕಾಗಿ ಮತ್ತೆ ಹಿಂದಿನದಕ್ಕಿಂತ ಅಧಿಕವಾಗಿ ಸಂಯುಕ್ತಸಂಸ್ಥೆಗಳನ್ನು ಸ್ಥಾಪಿಸಿದ್ದಾನೆ ಇದಕ್ಕಾಗಿ ಅಪಾರದ್ರವ್ಯ, ಮೇಧಾಶಕ್ತಿ, ದೇಹಶಕ್ತಿಯನ್ನು ಬಳಸುತ್ತಿದ್ದಾನೆ. ಇಂತಹ ಗಂಭೀರ ಹಾಗೂ ಹಾರ್ದಿಕಪ್ರಯತ್ನವೂ ಹುಡುಗರ ಆಟದಂತೆ ನಿಷ್ಫಲವಾಗಿ ಹೋಗುತ್ತಿರುವುದನ್ನು ನೋಡಿ ದಿಕ್ಕುಗಾಣದಾಗಿದ್ದಾನೆ

ನಾಲ್ಕಾರು ಶತಮಾನಗಳಿಂದ ಆರಂಭವಾದ ನೂತನಸಂಸ್ಕೃತಿ ಎಲ್ಲ ಕ್ಷೇತ್ರಗಳಲ್ಲೂ ತಾನೇತಾನಾಗಿ ಹರಡಿ, ಬೇರೂರಿ ನೀಡಿದ ಫಲಗಳೇ ಈ ಆಘಾತಗಳು. ಮಾನವ ತನಗೆ ತಿಳಿದ ಮಟ್ಟಿಗೆ ಈ ನೂತನ ಸಂಸ್ಕೃತಿ ತನ್ನ ಪ್ರಗತಿಗೆ ಮತ್ತು ಉದ್ಧಾರಕ್ಕೆ ದಾರಿಯೆಂದು ತಿಳಿದು ಇದನ್ನು ಬಹಳ ಆದರದಿಂದ ಪೋಷಿಸಿಕೊಂಡು ಬಂದಿದ್ದಾನೆ. ಈ ಮೊದಲು ತಾನು ಅಜ್ಞಾನಾಂಧಕಾರದಲ್ಲಿ, ದುಃಖದ ಕೂಪದಲ್ಲಿ ಇದ್ದೆನೆಂದೂ, ಇದೀಗ ತನ್ನ ಪ್ರಯತ್ನದಿಂದಲೇ 'ಬೆಳಕ'ನ್ನು ಕಂಡೆನೆಂದೂ ಹಿಗ್ಗುತ್ತಿದ್ದಾನೆ.

ಮಾನವ ಸಾಧಿಸಿದ ಈ 'ನೂತನಸೃಷ್ಟಿ'ಯಲ್ಲಿ 'ವಿಜ್ಞಾನ' ಮತ್ತು 'ಪ್ರಜಾಪ್ರಭುತ್ವ' ಇವೆರಡು ಹೆಗ್ಗುರುತುಗಳು. ಇವೆರಡು ಬಹಳ ಹಿಂದೆಯೇ ಜನ್ಮ ತಾಳಿದ್ದರೂ, ಅವು ಬೆಳಕನ್ನು ಕಂಡುದು ಈಗ, ಈ ನವಯುಗನಿರ್ಮಾಣದೊಂದಿಗೆ. ಅಷ್ಟೇಕೆ ಈ ನವಯುಗ ರೂಪುಗೊಂಡುದು, ಈಗ ಬೆಳೆದು ಬಲಿಯುತ್ತಿರುವುದೂ ಇವೆರಡರ ಪ್ರೇರಣೆ, ಸ್ಫೂರ್ತಿಯಿಂದಲೇ ಎಂದರೆ ತಪ್ಪಾಗಲಾರದು. ಇಂತಹದೊಂದು ಯುಗನಿರ್ಮಾಣಕ್ಕೆ ಹಾದಿ ಹಾಕಿಕೊಟ್ಟ ಈ ಎರಡಕ್ಕೂ ಒಂದು ಏಕಸೂತ್ರತೆ ಇದೆ. ಇವೆರಡರ ಉಗಮಸ್ಥಾನ ಒಂದೆ; ಅದೆಂದರೆ ಮಾನವನ **'ವಿಚಾರಶಕ್ತಿ'.** ಅನಾದಿಕಾಲದಿಂದಲೂ ಮಾನವ ತನ್ನ ವಿಚಾರಶಕ್ತಿಯನ್ನು ಬದಿಗೊತ್ತಿ ಇದಕ್ಕಿಂತಲೂ ತನ್ನಿತರ ಗುಣಗಳಿಗೆ, ಭಾವನೆಗಳಿಗೆ ಪ್ರಾಶಸ್ತ್ಯ ಕೊಟ್ಟುದರಿಂದ ಈ **ವಿಚಾರಶಕ್ತಿ** ಅಂತರ್ಗಾಮಿನಿಯಾಗಿತ್ತು. ಅಥವಾ ಇತರ ವಿಷಯಗಳಿಗೆ ಅಡಿಯಾಳಾಗಿತ್ತು. ಇದೀಗ ಅದಕ್ಕೆ ಸ್ವಾತಂತ್ರ್ಯ ಲಭಿಸಿತು. ಅದು ಇತರ ಎಲ್ಲ ಭಾವನೆಗಳನ್ನು ಗೆದ್ದು ಜಯ ಸಂಪಾದಿಸಿತು. ಹೀಗೆ ಸ್ವತಂತ್ರವಾದ ವಿಚಾರಶಕ್ತಿ ತಾನೇತಾನಾಗಿ ಮೈದೋರಿ ಪುಷ್ಟಿಗೊಂಡು ವಿಜ್ಞಾನ ಮತ್ತು ಪ್ರಜಾಪ್ರಭುತ್ವದಂತಹ ಉದ್ದಾಮಜ್ಞಾನ, ತತ್ತ್ವದ

ತಂದ. ಹೊಸದಾಗಿ ರಾಷ್ಟ್ರನಿರ್ಮಾಣ ಮಾಡಿದ. ಜಗತ್ತಿನ ಎಲ್ಲ ಮಾನವನಿಗೂ ಸುಖಪಡುವ ಹಕ್ಕಿದೆಯೆಂದು ಸಾರಿ, ಪ್ರಪಂಚವನ್ನೆಲ್ಲ ಸುಖದ ಬೀಡನ್ನಾಗಿ ಮಾಡಲು ಹವಣಿಸಿದ. ಅವನ ಈ ಮಹದಾಸೆಯ ಪೂರೈಕೆಯ ಹವಣಿಕೆಯಲ್ಲಿ ಪ್ರಜಾಪ್ರಭುತ್ವದ ಪರಮಾವಧಿಯ ಸರ್ವಸಮತಾತತ್ತ್ವವೊಂದು ಹೊರಹೊಮ್ಮಿತು. ಇದರ ಆವಿರ್ಭಾವದಿಂದ ಹಿಂದಿನ ಆದರ್ಶ, ತಾರತಮ್ಯದೃಷ್ಟಿ, ಕಲೆ, ಸಂಸ್ಕೃತಿಯ ಕಲ್ಪನೆಗಳೆಲ್ಲ ಮೂಲೆಗೊತ್ತಲ್ಪಟ್ಟಿತು. ಮಾನವನ ಅವಶ್ಯಕತೆಗಳ ಪೂರೈಕೆಯೇ ಮಾನವಸಂಸ್ಕೃತಿಯ ಪರಮ ಮುಖ್ಯ ಚಿಹ್ನೆ ಎಂದು ಸಾರಿತು. ಅದರಂತೆ ಪ್ರಾಚೀನಧರ್ಮ, ಸಂಸ್ಕೃತಿ, ಕಲೆಗಳ ವಿಧ್ವಂಸನ ಆರಂಭವಾಯಿತು. ಇದೀಗ ಇಂದಿನ ಪರಿಸ್ಥಿತಿಯ ನಿಜಸ್ವರೂಪ. ಇಂದು ಸತ್ಯಾನ್ವೇಷಣೆಗೆ ವಿಜ್ಞಾನವೇ ಹೆದ್ದಾರಿ. ಅದು ನಿರ್ಣಯಿಸಿದುದು ಸರಿ. ಅದು ತೋರಿದ ಆದರ್ಶ ಉದಾತ್ತವಾದದ್ದು. ಅದೇ ಎಲ್ಲಕ್ಕೂ ಮಾನದಂಡ.[1]

ಹೀಗೆ ಮಾನವನ ಸುಖಶಾಂತಿಗೆ, ಪಾಂಡಿತ್ಯಪ್ರತಿಭೆಗೆ ಸರ್ವಸಮತಾವಾದ ಮತ್ತು ವಿಜ್ಞಾನವೇ ಅಡಿಗಲ್ಲಾಯಿತು. ಇಂದು ಹಿಂದಿನ ಸುಖ ಶಾಂತಿಯ ರೂಪರೇಷೆಗಳೆಲ್ಲ ಅಳಿಸಿವೆ. ಸುಖದ ಇಂದಿನ ಕಲ್ಪನೆಯೇ ಬೇರೆ. ಮಾನವ ಜನಾಂಗದಲ್ಲಿ ಪ್ರತಿಯೊಬ್ಬನೂ ಆಹಾರ, ವಿಹಾರಗಳಿಗೆ ಕೊರತೆಯಿಲ್ಲದೆ ಸ್ವಚ್ಛಂದವಾಗಿಯೂ, ನಿರಾತಂಕವಾಗಿಯೂ ಜೀವಿಸಬೇಕು. ಅವನ ಬುದ್ಧಿಕುಶಲತೆಯೆಲ್ಲ ಅವನ ಮತ್ತು ಅವನ ಸುತ್ತಮುತ್ತಲಿನವರ ವೈಹಿಕಪ್ರಗತಿಗೆ ವಿನಿಯೋಗವಾಗಬೇಕು. ವಿಜ್ಞಾನ ಉತ್ತಮ ಆರೋಗ್ಯವನ್ನು ತಂದುಕೊಡಬೇಕು. ವಿಪುಲ ಆಹಾರವನ್ನು ಒದಗಿಸಬೇಕು. ಮನಃಪ್ರಸಾದಕ್ಕೆ ತಕ್ಕ ರಂಜನೆಯನ್ನು ತಂದೊಡ್ಡಬೇಕು. ಇಂದ್ರಿಯಗಳಿಗೆ ವಿಶೇಷ ಸುಖಸಾಧನೆಗಳನ್ನು ಅಣಿಮಾಡಿಕೊಡಬೇಕು. ಭೌತಿಕವಾಗಿ ಅಶಕ್ಯವಾದ ಸಾಹಸಗಳನ್ನು ಆಗುಮಾಡಿಸಬೇಕು. ಇದೀಗ ಮಾನವಜನ್ಮದ ಸಾರ್ಥಕತೆ, ಅವನ ಬುದ್ಧಿಯ ಇತಿಕರ್ತವ್ಯತೆ, ಮಾನವಸಂಸ್ಕೃತಿಯ ಧ್ಯೇಯ ಮತ್ತು ಸ್ವತಂತ್ರವಿಚಾರಶಕ್ತಿಯ ಅತ್ಯದ್ಭುತಸಾಧನೆ.[2]

ಇದರಲ್ಲಿ ಒಂದು ಮಾತ್ರ ಬಹಳ ಸೋಜಿಗದ ಸಂಗತಿ. ಇಷ್ಟೆಲ್ಲ ನಿಷ್ಕೃಷ್ಟ ರೂಪರೇಷೆಗಳಿದ್ದರೂ, ಮಾನವ ತನ್ನ ಈ ಬಗೆಯ ಸಾಧನೆಯ ಮೊಟ್ಟಮೊದಲ ಹಂತದಲ್ಲೇ ವಿಚಿತ್ರವಾದ ತೊಡಕಿನಲ್ಲಿ ಸಿಕ್ಕಿಬಿಟ್ಟಿದ್ದಾನೆ. ತನ್ನ ಶ್ರೇಯಸ್ಸಿಗೆ ತನ್ನ ಸಂಪೂರ್ಣ ವಿಚಾರದಿಂದಲೇ ರೂಪಗೊಂಡ ಈ 'ಸಾಧನೆ'ಗಳು ತಮ್ಮದೊಂದು ಬೇರೆ ಹಾದಿಯನ್ನು ಹಿಡಿಯುತ್ತಿರುವುದಲ್ಲದೆ ಮಾನವನನ್ನು ತನ್ನೆಡೆಗೆ ಸೆಳೆಯುತ್ತಿದೆ. ವಿಜ್ಞಾನ ಮಾನವನ ವಿಚಾರಕ್ಕೊಳಪಟ್ಟು ಬೆಳೆಯುವುದರ ಬದಲು ತನಷ್ಟಿಗೆ ತಾನೆ ಮಾನವನ ವಿಚಾರಶಕ್ತಿಯನ್ನು ಸೆಳೆದು ಸ್ವತಂತ್ರವಾಗಿ ಬೆಳೆಯಹತ್ತಿದೆ. ಅವನು ಮಾತ್ರ ಭ್ರಾಂತಿಯಿಂದ ಅದರ ಹಾದಿ ತನ್ನ ಒಳಿತಿಗೇ ಎಂದುಕೊಳ್ಳುತ್ತಿದ್ದಾನೆ.[3]

---

1. Because of its practical triumps, there grew up an almost mystical faith in the omnicompetence of science. Not only could it transform man's lifc, it could enable him to know the universe, not only could it render man practical service, it could give him ultimate truth.........the tests and attitude employed and adopted by men of science are the most effective for the purpose of discovering truth,

—God & Evil.

2. The real problems for me remain problems of individual and social life, of harmonious living, of a proper balancing of an individual's inner and outer life, of an adjustment of the relations between individuals and between groups, of a continuous becoming something better and higher, of social development, of the ceaseless adventure of man.

—Discovery of India, Nehru.

3. Medern civilisation finds itself in a difficult position because it does not suit us. It has been erected without the knowledge of our real nature. It was born from the whims of scientific discoveries, from the appetites of men, their illusions, their theories and their desires. Althongh constructed by our efforts, it is not adjusted to our size and shape.

—Man the Unknown—Carred.

ಸರ್ವಸಮತೆಯೆಂಬ ಉಚ್ಚತರ ಭಾವನೆ ಬೆಳೆದಂತಿಲ್ಲ, ಒಂದು ವಿಧವಾದ ರುದ್ರ್ಬೀಕರತೆ ಸಮಾಜದಲ್ಲಿ ತಲೆದೋರ ಹತ್ತಿ, ವಿಷಮತೆಯೇ ತಾಂಡವಾಡುತ್ತಿದೆ. ಎಲ್ಲೆಡೆಯಲ್ಲೂ ಭಯಾನಕ ಮೌನ, ಹಗೆನೋಟ, ಅಶಾಂತಿ ತಲೆದೋರಹತ್ತಿದೆ.

ಇದೀಗ ಮಾನವನನ್ನು ವಿಚಾರಪರವಶನನ್ನಾಗಿ ಮಾಡಿದೆ. ಮುಂದೆ ಎಂಬ ಭ್ರಾಂತಿಯಿಂದ ಅಡಿಯಿಡುವ ಮಾನವ ತಪ್ಪುಹೆಜ್ಜೆ ಹಾಕುತ್ತಿದ್ದೇನೆಂದು ಸಂಶಯ ತಾಳುತ್ತಿದ್ದಾನೆ. ಇದು ಮಾನವ ಸಂಸ್ಕೃತಿಯ ಇತಿಹಾಸ ದಲ್ಲಿ ಒದಗಿರುವ ಅತಿಮುಖ್ಯವಾದ ಪರ್ವಕಾಲ. ಹೀಗೆಯೇ ಮುಂದುವರಿದಲ್ಲಿ ಮಾನವಜನಾಂಗ ನಾಶವಾದೀ ತೆಂಬ ಭಯ ತಜ್ಞರಿಗೆ ಆಗಹತ್ತಿದೆ. ವಿಜ್ಞಾನ ಭಸ್ಮಾಸುರನ ವರದಂತೆ. ಮಾನವನ ಪ್ರಗತಿಗೆ ಸಾಧಕವಾಗು ವುದರ ಬದಲು ಅವನ ವಿಧ್ವಂಸನಕ್ಕೆ ಅದು ಕೈದೀವಿಗೆಯಾಗುತ್ತಿದೆ. ಈ ವಿಧ್ವಂಸನ ಮಾನವನಿಗೆ ಒಂದು ಪ್ರಲೋಭನವಾಗಹತ್ತಿದೆ. ಗಾಯವನ್ನು ಮತ್ತೆಮತ್ತೆ ತುರಿಸಿಕೊಂಡಂತೆ ಮಾನವ ಅನಿವಾರ್ಯವಾಗಿ, ಅಸಹಾಯಕನಾಗಿ ಇಂದಿನ ಈ ವಿನಾಶಕರ ಸ್ಥಿತಿಗೆ ಸಿಲುಕಿ ನರಳುತ್ತಿದ್ದಾನೆ. ಇದರಿಂದ ಮುಕ್ತಿ ಹೇಗೆಂಬುದೇ ತಿಳಿಯದಾಗಿದೆ.[1]

ಪುರಾಣಗಳಲ್ಲಿ ಕಲಿಯುಗವನ್ನು ಬಣ್ಣಿಸುವಾಗ ಹಿಂದಿನ ಮೂರು ಯುಗಗಳಲ್ಲಿಲ್ಲದ ಒಂದು ಆಸುರಭಾವ ಕಲಿಯುಗಕ್ಕಿದೆ; ಆದ್ದರಿಂದ ಈ ಯುಗ ಮಹಾ ದುಃಖಪ್ರದ; ಹೇಯ ಎಂದು ಭವಿಷ್ಯ ನುಡಿದುದು ಬಹುಶಃ ಇಂತಹ ಕಠಿಣತರ ಸನ್ನಿವೇಶವನ್ನು ಸೂಚಿಸುವುದಕ್ಕಾಗಿಯೇ ಇರಬೇಕು.

ಅದೇನೇ ಇರಲಿ. ಇಂದಿನ ಪರಿಸ್ಥಿತಿಯನ್ನು ಒಮ್ಮೆ ಸೂಕ್ಷ್ಮತರವಾಗಿ ವಿಚಾರ ಮಾಡಿದರೆ, ಹಿಂದಿನ ಸಮಯ ಸನ್ನಿವೇಶಗಳೊಂದಿಗೆ ಇದನ್ನು ತೂಗಿಸಿನೋಡಿದರೆ, ಇಂತಹ ವಿಷಮ ಸನ್ನಿವೇಶಕ್ಕೆ ಕಾರಣ ಸ್ವಲ್ಪ ಮಟ್ಟಿಗಾದರೂ ತಿಳಿದೀತು. ಇಂದಿನ ವಿನಾಶದ ಹಾದಿಯತ್ತ ಮಾನವನನ್ನು ಸಾಗಿಸುತ್ತಿರುವ ಅವನ ವಿಚಾರ ಶಕ್ತಿಯೇ ಅವನಲ್ಲಿಯ ಒಂದು ಪ್ರೇರಣೆಯಿಂದ ಇದರ ಮೂಲದೋಷವನ್ನು ಕಂಡುಹಿಡಿಯಲು ಸಾಧ್ಯವಾಗ ಬಲ್ಲುದು. ಸ್ವತಂತ್ರವಿಚಾರದ ಸ್ವರೂಪವೇ ಹೀಗೆ. ಅದು ಇಕ್ಕಲಗಿನಂತೆ. ಬಾಧಕವೂ ಹೌದು, ಸಾಧಕವೂ ಹೌದು.

ಜಗತ್ತಿನಲ್ಲಿ ಜೀವೋ ಜೀವಸ್ಯ ಜೀವನಂ ಎಂಬುದೊಂದು ಚೇತನರ ನಿಯಮವಾದರೆ, ಇರು–ಇರಗೊಡು (live & let live) ಎಂಬುದು ಅದಕ್ಕಿಂತ ಮೇಲ್ಮಟ್ಟದ ನಿಯಮ. ಚೇತನವರ್ಗದ ಕೀಳುದರ್ಜೆಯ ಕ್ರಿಮಿಕೀಟಾದಿಗಳಿಗೆ ಮೊದಲನೆಯ ನಿಯಮ ಅನ್ವಯಿಸುವಂತೆ, ಉತ್ತಮ ದರ್ಜೆಯ ಪ್ರಾಣಿಗಳಿಗೆ, ಮುಖ್ಯ ವಾಗಿ ಮನುಷ್ಯನಿಗೆ ಎರಡನೆಯ ನಿಯಮ ಅನ್ವಯಿಸುವುದು.

ಇತರ ಪ್ರಾಣಿವರ್ಗಕ್ಕಿಂತ ಮನುಷ್ಯ ಒಂದು ಮುಖ್ಯವಾದ ವಿಷಯದಲ್ಲಿ ಭಿನ್ನನಾಗಿದ್ದಾನೆ. ಇತರ ಪ್ರಾಣಿಗಳಿಗಿಲ್ಲದ "ಬುದ್ಧಿ"ಯೆಂಬುದು ಮನುಷ್ಯನ ವಿಶಿಷ್ಟ ಭಾಗ್ಯ. ಈ "ಬುದ್ಧಿ"ಯಿಂದ ವಿಚಾರ ಮಾಡಿ

---

1. (a) In sacrificing mind to matter, modern civilisation has perpetrated a momentous error. An error all the more dangerous because no body revolts against it, because it is accepted as easily as the unhealthy life in great cities and the confinement in factories.

(b) our curiosity must turn aside from its present path and take another direction. —Carrel.

(c) Scepticism in matters of belief, guidelessness in matters of conduct, indifference in regard to value, these are the outstanding factors in the mood of the west. —Counterattaek from the East.

ಮನುಷ್ಯ ತನ್ನ ಸುತ್ತಮುತ್ತಲಿನ ವಾತಾವರಣವನ್ನು ಅರ್ಥಮಾಡಿಕೊಳ್ಳುವುದಲ್ಲದೆ, ಅದನ್ನು ತನ್ನ ಅನುಕೂಲಕ್ಕೆ ಉಪಯೋಗಿಸಿಕೊಳ್ಳುತ್ತಾನೆ. ಇತರ ಪ್ರಾಣಿಗಳು ಪ್ರಕೃತಿಯ ಕಟ್ಟಿಗೆ ಒಳಪಟ್ಟು ಒಟ್ಟಿಗೆ ಇರುವುದಾದರೆ, ಮನುಷ್ಯ ತನ್ನ ವಿವೇಕ ಹಾಗೂ ವಿಚಾರದಿಂದ ಇತರರೊಂದಿಗೆ ಇರಲೆತ್ನಿಸುತ್ತಾನೆ. ಇದಕ್ಕೆ ಮುಖ್ಯವಾಗಿ ತಾನು ಬದುಕುವುದು ಎಷ್ಟು ಮುಖ್ಯವೋ ಹಾಗೇ ಇತರರೂ ಬದುಕುವುದು ಅವಶ್ಯವೆಂಬ ಮಾನವನ ನಿರ್ಧಾರ ಕಾರಣ. ತಾನು ಚೆನ್ನಾಗಿ ಬಾಳಿ ಬದುಕಬೇಕೆಂಬ ಸ್ವಾರ್ಥಬುದ್ಧಿಯನ್ನೂ ಇತರರೂ ಬದುಕಲಿ ಎಂಬ ಉದಾರ ಬುದ್ಧಿಯನ್ನೂ ವಿಚಾರಪ್ರೇರಿತ ವಿವೇಕ ಒಟ್ಟುಗೂಡಿಸಿದೆ. ಆದ್ದರಿಂದಲೇ ಜೀವೋ ಜೀವಸ್ಯ ಜೀವನಂ ಎಂಬುದರ ಮೂಲಭೂತ ಸ್ವಾರ್ಥದ ಹಂತವನ್ನು ಮನುಷ್ಯ ಮೀರಿ ಮುಂದೆ ಹೋಗಿದ್ದಾನೆ. ಇರು (to live) ಎಂಬುದರೊಂದಿಗೆ ಇರಗೊಡು (let live) ಎಂಬ ಮನೋಧರ್ಮವನ್ನೂ ಮನುಷ್ಯನು ಬೆಳೆಸಿಕೊಂಡಿದ್ದಾನೆ. ಇದೀಗ ಮಾನವ ಜನಾಂಗದ ಭೂತ ಭವಿಷ್ಯತ್ತಿನ ಆಗುಹೋಗುಗಳ ಮೂಲಮಂತ್ರ.

ಈ ಉದಾತ್ತ ಮನೋಭಾವನೆಗೆ ಹಿಂಬದಿಯಲ್ಲಿರುವುದೇ ಸ್ನೇಹ, ಪರಸ್ಪರ ಪ್ರೇಮ. ಇರು, ಇರಗೊಡು ಎಂಬ ಎರಡು ಭಿನ್ನ ಮನೋಧರ್ಮ ಒಟ್ಟಿಗಿರಲು ವಿವೇಕ ಅವಶ್ಯಕ. ಈ ವಿವೇಕ ಬಂದುದು ಸ್ನೇಹದಿಂದ. ಆದ್ದರಿಂದ "ಸ್ನೇಹ"ವೇ ಚೇತನವರ್ಗದ ಅದರಲ್ಲೂ ಮನುಷ್ಯನ ಅತಿಮುಖ್ಯ ಧರ್ಮ.

ಮಾನವ ಜನಾಂಗದಲ್ಲಿ ಉಂಟಾದ ಕ್ಲೇಶ ಮತ್ತು ಒಡಕಿಗೆ, ಸ್ನೇಹಾಭಾವವೇ ಕಾರಣವೆನ್ನಬಹುದು. ಪರಸ್ಪರ ವಿಶ್ವಾಸ ಮತ್ತು ಸ್ನೇಹ ಕಡಿಮೆಯಾದಂತೆಲ್ಲ ದ್ವೇಷ ಅಧಿಕವಾಗಿ ತಿಕ್ಕಾಟ ಆರಂಭವಾಗುವುದು. ಅದಕ್ಕೆ ಸ್ನೇಹವೇ ತಕ್ಕ ಔಷಧ. ಮಾನವನ ಇತಿಹಾಸದಲ್ಲಿ ಈ ಅಂಶ ಎಲ್ಲ ಕಾಲಗಳಲ್ಲಿಯೂ ಸುಸ್ಪಷ್ಟವಾಗಿದೆ. ಅವಿಶ್ವಾಸವಿದ್ದೆಡೆ ಅಶಾಂತಿ, ದ್ವೇಷ. ಸ್ನೇಹವಿದ್ದೆಡೆ ಶಾಂತಿ. ಮಾನವ ತನ್ನ ಸ್ವತಂತ್ರವಿಚಾರಶಕ್ತಿಗೆ ಸಲ್ಲದ ಬೆಲೆ ಕೊಡುತ್ತ ಬಂದಂತೆ ಅವನಲ್ಲಿ ವಿಶ್ವಾಸವೆಂಬ ತೇವ, ದ್ರವ ಒಣಗುತ್ತ ಬಂದಿತು. ಮಿದುಳಿನ ಕ್ರಿಯೆ ಹೆಚ್ಚಾದಂತೆಲ್ಲ ಹೃದಯದ ಬೆಲೆ ಇಳಿಯಿತು. ತಿಳಿವು ಬೆಳೆದಂತೆ ಒಲವು ಕಡಿಮೆಯಾಯಿತು. ವಿಶ್ವಾಸಕ್ಕೆ ನಂಬಿಕೆ ಅಡಿಗಲ್ಲು. ಸ್ವತಂತ್ರವಿಚಾರಕ್ಕೆ ಪ್ರೋದ್ಬಲವಾದುದು ಸಂಶಯದೃಷ್ಟಿ. 'ನಂಬಿಕೆ'ಯ ಸ್ಥಾನವನ್ನು 'ಸಂಶಯದೃಷ್ಟಿ' ಆಕ್ರಮಿಸಿತು. ಸರಿ ಚೇತನರಲ್ಲಿಯ ನಂಬಿಕೆ ಹೋದಂತೆ ಜಡವನ್ನು ತನ್ನ ಸುಖಕ್ಕೆ ಸಾಧನವನ್ನಾಗಿ ಮಾಡಿಕೊಳ್ಳಲು ಮಾನವ ಹವಣಿಸಿದ. ಇದರ ಫಲವೇ ಇಂದಿನ ಈ ಸಂಸ್ಕೃತಿ. ಇನ್ನೂ ಇದರಿಂದ ಅವನಿಗೆ ತೃಪ್ತಿಯಾಗಿಲ್ಲ. ಅವನಿನ್ನೂ ಜಡದ ಬೆನ್ನು ಹತ್ತಿ ಹೊರಟಿದ್ದಾನೆ. ಅದರಿಂದಲೇ ತನ್ನ ಸುಖಸರ್ವಸ್ವವನ್ನು ಕಂಡುಕೊಳ್ಳುವೆನೆಂದು ಹಾತೊರೆಯುತ್ತಿದ್ದಾನೆ. ಇದಕ್ಕಾಗಿಯೇ ವಿಜ್ಞಾನವನ್ನೂ ಬೆಳೆಸುತ್ತಿದ್ದಾನೆ. ಇದರಿಂದಾಗಿ ಅವನ "ಚೇತನಧರ್ಮ" ನಾಶವಾಗುತ್ತಿದೆ. ಇದೀಗ ಇಂದಿನ ಗಂಡಾಂತರ.[1]

ಮಾನವ ಎಷ್ಟೇ ಸುಖೋಪಕರಣಗಳನ್ನು ಹೆಚ್ಚಿಸಿಕೊಂಡರೂ, ತನ್ನ ಜನಾಂಗದ ಹಿತರಕ್ಷಣೆಗೆ ಎಷ್ಟೇ ನಿಯಮಾವಳಿಗಳನ್ನು ಹಾಕಿಕೊಂಡರೂ, ಅವೆಲ್ಲ ನಿರ್ಜೀವ—ಆದ್ದರಿಂದ ನಿಷ್ಫಲ. ಗಿಳಿಮರಿಯನ್ನು ಸ್ವರ್ಣ ಪಂಜರದಲ್ಲಿಟ್ಟಂತೆ. ಅವನಲ್ಲಿಯ ಸ್ನೇಹ ಮೊಳೆತ ಹೊರತು ಅದಾವುದೂ ಅವನಿಗೆ ಸುಖಕರವಾಗಲಾರವು. ಸ್ನೇಹ ಪರಿಪುಷ್ಟವಾದಲ್ಲಿ ಈ ಉಪಕರಣಗಳು ಅತಿತುಚ್ಛ ಮತ್ತು ಅನುಪಯುಕ್ತ. ಈ ನಿಯಮಾವಳಿಗಳು ಅಪ್ರಯೋಜಕ. ಇಂದಿನ "ಉಚ್ಚತರ ಮಾನವಧ್ಯೇಯ"ಗಳು ಸಫಲವಾಗಲು ಅವುಗಳ ಸ್ಥಾನ ಬರವಣಿಗೆಯನ್ನು ಬಿಟ್ಟು ಹೃದಯಕ್ಕೆ ಬರಬೇಕು. ಬರವಣಿಗೆ ಹೆಚ್ಚಾದಷ್ಟೂ ಕ್ಲೇಶ. ಹೃದಯದಲ್ಲಿನ ಒಂದಂಶವನ್ನು ನೂರು ಬರಹವೂ ಸ್ಪಷ್ಟಪಡಿಸಲಾರವು.[2]

---

1. Man should be the measure of all. On the contrary he is a stranger in the world he has created........The enormous advance gained by the sciences of inanimate matter over those of living things is one of the greatest catastrophies ever suffered by humanity.

2. It would be for better to pay attention to ourselves than to construct faster steamers, more comfortable automobiles, cheaper radios or telescopes.

—God & Evil—C.E.M. Joad.

ಆದ್ದರಿಂದ ಇಂದು ಮಾನವ ಗಳಿಸಬೇಕಾದುದು ತಾನು ತನ್ನ ಅವಿವೇಕದಿಂದ ಕಳೆದುಕೊಂಡ "ಸ್ನೇಹ-ಪ್ರೇಮ"ವೆಂಬ ತನ್ನ ಅಮೂಲ್ಯ ಸಂಪತ್ತನ್ನು. ಅದನ್ನವನು ಗಳಿಸಿಕೊಂಡಲ್ಲಿ ಅವನ ಹಿತ ಕರಗತವಾಗುವುದು.

ಜಗತ್ತಿನ ಎಲ್ಲ ಧರ್ಮಗಳೂ ಇದನ್ನು ಒತ್ತಿ ಹೇಳಿದವು. ಅವುಗಳು 'ಮೂಢನಂಬಿಕೆ'ಯೆಂದು ಮಾನವ ಅವುಗಳೆಲ್ಲವನ್ನೂ ಕಿತ್ತೆಸೆದುದೇ ಅವನ ಇಂದಿನ ಕ್ಷೀಣಗತಿಗೆ ಕಾರಣ. ಭಾರತದ ಸಂಸ್ಕೃತಿ ಮತ್ತು ಧರ್ಮ ಇದರ ಮರ್ಮವನ್ನು ಚೆನ್ನಾಗಿ ಬೋಧಿಸಿತು. ಇತರ ಧರ್ಮಗಳು ಭಾರತದ ಸಂಸ್ಕೃತಿಯ ಕೆಲವೊಂದು ಮೊಗವನ್ನು ಮಾತ್ರ ಆಯ್ದು ತನ್ನದಾಗಿ ಮಾಡಿಕೊಂಡು ಹೊರಟವು. ಅದರ ನಿಜ ಹೃದಯವನ್ನು ಯಾವುದೂ ಗ್ರಹಿಸಲಿಲ್ಲ. ಭಾರತಸಂಸ್ಕೃತಿಯ ನಿಜವಾದ ಸಾರವನ್ನು ಜಗತ್ತಿಗೆ ಸಾರಲಾರದೆ ಹೋಯಿತು.

ಭಾರತ ಸಂಸ್ಕೃತಿಯ, ಆರ್ಯಧರ್ಮದ ಮುಖ್ಯಾಂಶ ಒಂದು ಮಾತಿನಲ್ಲಿ ಹೀಗೆ ಹೇಳಬಹುದು. "ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃಪುನಃ । ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ ॥" ವ್ಯಾಸರು ಈ ವಾಕ್ಯದಲ್ಲಿ ಮಾನವ ಸಂಸ್ಕೃತಿಯ ಪರಮ ರಹಸ್ಯವನ್ನು ಉಪದೇಶಿಸಿದ್ದಾರೆ. ಇದೇ ಆರ್ಯಧರ್ಮದ ನಿಜವಾದ ಕುರುಹು.

ಮಾನವನ ಪ್ರಗತಿಗೆ, ಅಷ್ಟೇಕೆ ಅವನ ಇರವಿಗೆ ಸ್ನೇಹ ಅಥವಾ ಪ್ರೀತಿಯೆಂಬುದು ಜೀವಾಳವೆಂಬುದಂತೂ ಸ್ಪಷ್ಟವಾಯಿತು. ಇಂತಹ ಪ್ರೀತಿಗೆ ಶಾಶ್ವತವಾದ ನೆಲೆಯೊಂದಿಲ್ಲದೆ ಅದು ಜಾಗ್ರತವಾಗಲಾರದು. ಮಾನವ ತನ್ನ ಸೋದರ ಮಾನವನೊಡನೆ ಪ್ರೀತಿ ತೋರಲು ಪ್ರಬಲವಾದ ಹಿನ್ನೆಲೆ ಬೇಕು. ಭಿನ್ನಮತಿಕರಾದ ಚೇತನರಲ್ಲಿ ಒಮ್ಮುಖದ ವಿಶ್ವಾಸ ಬೆಳೆಯಲು ಅದಕ್ಕೊಂದು ಆಶ್ರಯಸ್ಥಾನ ಬೇಕು. ಅದೇ ಪರಮಾತ್ಮ, ನಾರಾಯಣ. ನಾರಾಯಣ ಪ್ರೇಮದ ಮಾತೃಸ್ಥಾನ. ಸಕಲ ಕಲ್ಯಾಣಗುಣಗಳ ತೌರೂರು ಅವನು. ಅವನ ವಾತ್ಸಲ್ಯದಿಂದ ಮಾನವ 'ಸ್ನೇಹ'ವೆಂಬುದನ್ನು ಕಂಡುಕೊಂಡ. ಇದರ ಬಗೆ ಬುದ್ಧಿಗೆ ಗೋಚರವಾಗಲಾರದು. ಅದು ಹೃದಯಕ್ಕೆ ನಿಲುಕುವುದು. ಪ್ರೀತಿಸುವವನಿಗೆ ಮಾತ್ರ ಅದರ ಮಾರುತ್ತರ ದೊರಕೀತು. ವಿಚಾರಗ್ರಸ್ತ ಕೊನೆಯವರೆಗೂ ವಿಚಾರಗ್ರಸ್ತನೇ. ಆದ್ದರಿಂದ ಪ್ರೇಮಮೂರ್ತಿಯಾದ ಭಗವಂತನನ್ನು ಕೇಂದ್ರೀಕರಿಸಿ ಮಾನವನ ಎಲ್ಲಾ ದೈಹಿಕ ಹಾಗೂ ಬೌದ್ಧಿಕ ಚಟುವಟಿಕೆಗಳು ನಡೆಯಬೇಕು. ಇದೇ ನಿಜವಾದ ಸಂಸ್ಕೃತಿ. ಮಾನವಜೀವಿತಕ್ಕೆ ಇದೇ ಸಂಜೀವಿನಿ. ಇದರಿಂದ ಹೊರಳಿದ ಯಾವೊಂದು ವಿಷಯವೂ ಅಗ್ರಾಹ್ಯ, ಹೇಯ ಮತ್ತು ತುಚ್ಛ ಎಂದು ಸಾರಿತು ಆರ್ಯಧರ್ಮ. ಅಂತೆಯೇ ಆರ್ಯಧರ್ಮದಿಂದ ಪೋಷಿತವಾದ ಭಾರತಸಂಸ್ಕೃತಿ ಆಧ್ಯಾತ್ಮವಿದ್ಯೆಯ ಸೋಂಕಿಲ್ಲದ ಯಾವೊಂದು ಶಾಸ್ತ್ರವನ್ನೂ ಬೆಳೆಸುಗೊಡಲಿಲ್ಲ. ಅರ್ಥಶಾಸ್ತ್ರ ಮತ್ತು ಕಾಮಶಾಸ್ತ್ರದಂತಹ ಐಹಿಕೈಕಪ್ರಯೋಜನವುಳ್ಳ ವಿದ್ಯೆಗಳಿಗೂ ನಿಷೇಧಮುಖದಿಂದ ಪರಂಪರೆಯಾಗಿ ಭಗವತ್ಪ್ರಾಪ್ತಿಯೇ ಗುರಿ ಎಂದು ತಿಳಿಸಿತು. ಅಂತೆಯೇ ಭಾರತದ ವೈದ್ಯ, ಜ್ಯೋತಿಷ, ವಾಸ್ತು, ಶಿಲ್ಪ, ಸಂಗೀತ, ಲಲಿತಕಲೆ, ಸಾಹಿತ್ಯ ಇತ್ಯಾದಿ ಎಲ್ಲ ಬೌದ್ಧಿಕ ಹಾಗೂ ಕಲಾತ್ಮಕ ವಿದ್ಯೆಗಳೂ ಆಧ್ಯಾತ್ಮಶರಣವಾದವು. ಭಗವಂತನ ಸಂಬಂಧವಿಲ್ಲದ ಯಾವುದೂ ಗ್ರಾಹ್ಯವಲ್ಲ, ಮುಖ್ಯವಲ್ಲವೆಂಬ ಅನುಭವದಿಂದ ಬಂದ ನಿರ್ಣಯ ಭಾರತ ಸಂಸ್ಕೃತಿಯ ಹೆಚ್ಚಳ. ಇಂದಿನ ಸಂಸ್ಕೃತಿಯಲ್ಲಿ ಉಳಿದ ವೈಭವಗಳೆಷ್ಟಿದ್ದರೂ ಇದರ ಸೋಂಕೇ ಇಲ್ಲ. ಅಷ್ಟೇ ಅಲ್ಲ, ಇದು ಇರಲೇ ಕೂಡದೆಂಬ ದುಷ್ಟ ಹಠ. ಅಂತೆಯೇ ಇದು ದೀರ್ಘನಾಶದ ಕಡೆ ತಳ್ಳುತ್ತಿದೆ.[1]

ಭಾರತದಲ್ಲೇ ಬೆಳೆದು ಬೆಳಕು ಕಂಡ ಅನೇಕ ದರ್ಶನಗಳು ಆರ್ಯಧರ್ಮದ ಈ ರಹಸ್ಯವನ್ನು ಗ್ರಹಿಸಲಿಲ್ಲ. ಒಂದು ದರ್ಶನ ಶುಷ್ಕ ಜ್ಞಾನಕ್ಕೆ ಹೆಚ್ಚು ಮಹತ್ವ ಕೊಟ್ಟಿತು. ಮತ್ತೊಂದು ಜಗತ್ತಿನ ರೂಪ ರೇಷೆಗಳನ್ನೂ

---

1. Nevertheless the westerner badly needs faith. Ill at ease in the spiritual vacum left by the traditional beliefs, he expresses his loneliness by a feverish clutching at any straw that seems likely to lend support.

ಅದರ ಘಟಕಪದಾರ್ಥಗಳನ್ನೂ ತಿಳಿಯಹೋಗಿ ಅದರ ವಿಭಾಗದಿಂದಲೇ ಕೃತಾರ್ಥವಾಯಿತು. ಮತ್ತೊಂದು ಮನುಷ್ಯನ ಒಳಹೊರ ಶುದ್ಧಿ ಸಂಯಮಗಳಿಗೆ ಪ್ರಾಶಸ್ತ್ಯ ಕೊಟ್ಟು ನಿಂತಿತು. ಇನ್ನೊಂದು ಯಾಂತ್ರಿಕಕೃತಿಯೇ ಮನುಷ್ಯನ ಸರ್ವಸ್ವವೆಂದಿತು. ಇದೆಲ್ಲ ಸಮರ್ಪಕವಲ್ಲವೆಂದು ತಿಳಿದರೂ ಇನ್ನು ಕೆಲವು ಪಂಥಗಳು ಎಲ್ಲವನ್ನೂ ಬಿಟ್ಟು ಕೇವಲ ಅಂಧವಿಶ್ವಾಸ, ಮೂಕಸ್ನೇಹವೇ ಸಾಕೆಂದು ಸಾರಿದವು. ಎಲ್ಲಕ್ಕೂ ಮಿಗಿಲಾಗಿ ಇನ್ನೊಂದು ಮತವು ಮಾನವನ ಸರ್ವಸ್ವವನ್ನೂ ಸುಳ್ಳೆಂದು ತಳ್ಳಿಹಾಕಿ 'ನಿಜ'ವಾದ ಭಗವಂತನನ್ನು 'ಸುಳ್ಳಿ'ನಿಂದ 'ಸುಳ್ಳಾ'ಗಿ ಕಟ್ಟಿ 'ಕಣ್ಣಾಮುಚ್ಚಾಲೆ' ಆಡಿತು. ಇದೊಂದು ಇಂದಿನ ಸಂಸ್ಕೃತಿಗೆ ನೇರ ವಿರುದ್ಧವಾದ ಆದರೆ ಅಷ್ಟೇ ಬಾಲಿಶವೂ, ಅಸತ್ಯವೂ ಆದ ಸಿದ್ಧಾಂತ. ಜಡವನ್ನೇ ಸರ್ವಸ್ವವನ್ನಾಗಿ ಮಾಡಿ, ತಾನು ಅಸಹಾಯನಾಗಿ ಕಣ್ಣು ಬಿಡುತ್ತಿರುವ ಮಾನವನೇ ತನ್ನ ವಿಚಾರಶಕ್ತಿಯಿಂದ ಸಲ್ಲದ ಕನಸನ್ನು ಕಲ್ಪಿಸಿಕೊಂಡು 'ಸುಳ್ಳಿ'ನಿಂದ ಎಲ್ಲವನ್ನೂ ಒಂದುಗೂಡಿಸಿ ಅಥವಾ ಇಲ್ಲದಂತೆ ಮಾಡಹೋಗಿ ತನ್ನ ಅಸ್ತಿತ್ವಕ್ಕೇ ಧಕ್ಕೆ ತಂದುಕೊಂಡು ಒದ್ದಾಡುತ್ತಿದ್ದಾನೆ.

ಹೀಗಾಗಿ ಆರ್ಯಧರ್ಮದ ರಹಸ್ಯವನ್ನೇ ಯಾವ ದರ್ಶನಕಾರರೂ ತಿಳಿಯಲಿಲ್ಲ. ಇಂತಹ ಗೊಂದಲದಲ್ಲಿ ಅದರ ರಹಸ್ಯವನ್ನು ಸಮೀಚೀನವಾಗಿ ಹೊರಗೆಡಹಿ ತತ್ತ್ವಜಿಜ್ಞಾಸುವಿನ ಕಣ್ತೆರಿಸಿದ ಕೀರ್ತಿ ದ್ವೈತಸಿದ್ಧಾಂತಕ್ಕೇ ಸೇರಿದ್ದು. ಇದೇ ಆರ್ಯಧರ್ಮವನ್ನೂ, ಭಾರತದ ಸಂಸ್ಕೃತಿಯನ್ನೂ ಸರಿಯಾದ ರೀತಿಯಲ್ಲಿ ಎತ್ತಿಹಿಡಿಯಿತು. ಅದರ ಪರಿಮಳವನ್ನು ಹೊರಸೂಸಿತು. ಭಾರತ ಸಂಸ್ಕೃತಿಯ ನಿಜವಾದ ಪ್ರತಿನಿಧಿಯೇ ದ್ವೈತಮತ. ಇದೀಗ ಇದರಲ್ಲಿ ಕರ್ಮ, ಜ್ಞಾನ, ಯೋಗ, ಭಕ್ತಿಯ ಸುಂದರ ಸಮನ್ವಯವಾಗಿದೆ. ಅದರದರ ಪಾತ್ರ, ಸ್ಥಾನ ವಿಶದೀಕರಿಸಿದೆ. ಧ್ಯೇಯನಾದ ನಾರಾಯಣನ ಪ್ರಾಪ್ತಿಗೆ ಹೆದ್ದಾರಿಯಾಗಿ ಸಕಲ ಮಾನವರ ಕಲ್ಯಾಣ ಜೀವನಕ್ಕೆ ಜೀವನಾಡಿಯಾದ ಪ್ರೇಮದ ಬಗೆ ಸುಂದರವಾಗಿ ನಿರೂಪಿತವಾಗಿದೆ. ಮಾನವನ ಪ್ರಗತಿಗೆ ಸಾಧಕವಾಗಿ ಉಜ್ವಲ ಭವಿಷ್ಯದ ಭರವಸೆ ನೀಡುವ ಶಾಸ್ತ್ರ ಆಚಾರ್ಯರಿಂದ ಉಪದಿಷ್ಟವಾದ ದ್ವೈತಾಮೃತವಾಣಿ. ಇದರ ಸಕಲ ವಿಷಯಗಳೂ ವಿಚಾರ ಪರಿಪ್ಲುತವೂ, ಅನುಭವಪುಷ್ಟವೂ, ಶಾಸ್ತ್ರಸಮ್ಮತವೂ, ಕಲ್ಯಾಣಕರವೂ ಆಗಿವೆ.

ದ್ವೈತಮತದಲ್ಲಿ ಜೀವಬಾಹುಲ್ಯ ಅತಿಮುಖ್ಯ ಸಿದ್ಧಾಂತಗಳಲ್ಲೊಂದು. ಪ್ರತಿಯೊಬ್ಬ ಜೀವನ ಪ್ರತ್ಯೇಕ ಅಸ್ತಿತ್ವ, ಪ್ರತ್ಯೇಕ ಗುಣಗಳು, ಭಾವನೆಗಳು ಮತ್ತು ಸಂಸ್ಕಾರಗಳೂ ಜೀವನ ಆಂತರಿಕ ಅನುಭವಕ್ಕೆ ಗೋಚರವಾಗುತ್ತದೆ. ಮಾನವ ಸಂಸ್ಕೃತಿಯಲ್ಲಿ ಪ್ರತಿಯೊಬ್ಬ ಮಾನವನೂ ಬೇರೆಯೆಂಬಂಶ ಅತಿಮುಖ್ಯವಾದದ್ದು. ವಾಸ್ತವಿಕ ಪ್ರಪಂಚದ ಈ ಅಂಶವನ್ನು ಅಲ್ಲಗಳೆದು ಎಲ್ಲ ಜೀವರನ್ನೂ ಒಟ್ಟುಗೂಡಿಸುವುದು ವಿಚಾರವಿವೇಚನಕ್ಕೆ ಹಿತಕರವಾದ್ದರಿಂದ ಅದೇ ತತ್ತ್ವ. ಜೀವರ ಭಿನ್ನತೆ ತತ್ತ್ವವಲ್ಲವೆನ್ನುವುದು ಸುಂದರವಾದ ಕನಸಿನಂತೆ. ಭಿನ್ನತೆ ಮನಸ್ಸಿಗೆ, ಊಹೆಗೆ ಹಿತಕರವಲ್ಲದಿದ್ದರೂ, ಕಠೋರವಾದ ಸತ್ಯ. ಇದು ಮಾನವ ಸಂಸ್ಕೃತಿಯಲ್ಲಿನ ಮೊದಲನೆಯ ಅಂಶ. ಇದನ್ನು ನಿರ್ಭಯವಾಗಿ ಎತ್ತಿಹಿಡಿದವರು ಆಚಾರ್ಯರು.

ಈ ಭಿನ್ನತೆಯಿಂದಲೇ ಜೀವರುಗಳಲ್ಲಿ ತಾರತಮ್ಯವೂ ಏರ್ಪಡುತ್ತದೆ. ಜೀವರುಗಳಲ್ಲಿ ಭೇದವನ್ನು ಒಪ್ಪಿ, ತರತಮಭಾವ ಒಪ್ಪದಿದ್ದರೆ, ಅರ್ಧಚರಿತೀಯವಾಗುತ್ತದೆ. ಈ ನೀಚೋಚ್ಚಭಾವನೆಯನ್ನು ತತ್ತ್ವಶಾಸ್ತ್ರದಲ್ಲಿ ಮೊಟ್ಟಮೊದಲಿಗೆ ಸೇರಿಸಿದವರು ಪೂರ್ಣಪ್ರಜ್ಞರು. ಅದರ ಮಹತ್ವದ ಅರಿವು ಇನ್ನಾವ ದಾರ್ಶನಿಕರಿಗೂ ಆಗಲಿಲ್ಲ. ಅದನ್ನು ಅಲ್ಲಗಳೆದರೆ ತತ್ತ್ವಶಾಸ್ತ್ರದಲ್ಲಿನ ಅತಿಮುಖ್ಯ ಅಂಗವಾದ ಜಗತ್ತಿನ ಸಮಸ್ಯೆ ಇತ್ಯರ್ಥವಾಗಲಾರದು.

ಈ ತಾರತಮ್ಯ ತತ್ವಕ್ಕೆ ಹೊಂದಿಕೊಂಡಂತೆ ಇರುವುದು ಜೀವತ್ರೈವಿಧ್ಯ ವಾದ. ಇದೂ ದ್ವೈತ ಮತದಲ್ಲಿ ಮಾತ್ರ ಕಾಣಬಹುದಾದ ತತ್ವ. ಜಗತ್ತಿನಲ್ಲಿ 'ಒಳಿತು'—ಸತ್ವ ಗುಣ ಹೇಗೆ ಕಾಣಬರುತ್ತದೋ, 'ಕೆಡಕು'—

ತಮೋಗುಣವೂ ಅದರಂತೆ ಕಂಡುಬರುವುದು ಅನಿವಾರ್ಯ. ಅಷ್ಟೇ ಅಲ್ಲ ದೋಷರಹಿತವಾದ ಪದಾರ್ಥವೇ ಜಗತ್ತಿನಲ್ಲಿ ಸಿಕ್ಕಲಾರದೆಂದರೂ ಅತಿಶಯೋಕ್ತಿಯಾಗುವುದಿಲ್ಲ. ಹೀಗೆ ಎಲ್ಲೆಡೆಯಲ್ಲೂ ರೂಢಮೂಲವಾಗಿರುವುದಷ್ಟೆ ಅಲ್ಲದೆ, ಈ ಕೆಡಕು ಈ ದೋಷ ಪದಾರ್ಥಗಳ ಸ್ವರೂಪದಲ್ಲಿ ಬೆರೆತುಹೋಗಿದೆ. ಇಂತಹುದನ್ನು ಇಲ್ಲವೆಂದು ವಾದಿಸುವುದು ಊಹಾಶಕ್ತಿಗೆ ಹಿತಕರವೇ ಹೊರತು ಇದರಿಂದ ವಸ್ತು ಸ್ವಾಭಾವವನ್ನು ಬದಲಿಸಿದಂತಾಗುವುದಿಲ್ಲ. ಪ್ರಾಯಶಃ ಎಲ್ಲ ದಾರ್ಶನಿಕರೂ ಕೆಡುಕಿನ ಈ ಅನಿವಾರ್ಯತೆಯನ್ನು ಅಂಗೀಕರಿಸಲಿಚ್ಛಿಸದೇ ಇದಕ್ಕೆ ಒಂದಿಲ್ಲೊಂದು ರೀತಿಯ ಸಮಾಧಾನ ಹೇಳಿದ್ದಾರೆ. ಆದರೆ ಇದಾವುದೂ ಗಮನಾರ್ಹವಾಗಿಲ್ಲ.[1]

ಈ ಮೂರು ತತ್ವಗಳೂ ಜಗತ್ತಿಗೆ ಅಂದರೆ ಜೀವರುಗಳಿಗೆ ಸಂಬಂಧಪಟ್ಟುವು. ಮಾನವ ಸಂಸ್ಕೃತಿಯನ್ನು ವಿಚಾರ ಮಾಡುವಾಗ ನಾವು ಈ ಮೂರು ಅಂಶಗಳನ್ನು ಅತಿ ಮುಖ್ಯವಾಗಿ ಗಮನಿಸಬೇಕು. ಮಾನವನಲ್ಲಿ ಶಾಂತಿ ಮೂಡಿ ಅವನು ಪ್ರಗತಿಪಥದಲ್ಲಿ ಅಡಿಯಿಡಬೇಕಾದರೆ, ಅವನಲ್ಲಿ 'ಸ್ನೇಹ—ಸೌಹಾರ್ದ' ಅತ್ಯವಶ್ಯ. ಅದಿಲ್ಲದೆ ಇತರ ಯಾವ ಸಾಧನಗಳೂ ಸಾರ್ಥಕವಲ್ಲವೆಂಬುದು ಸುಸ್ಪಷ್ಟವಾಯಿತು. ಈ ಸೌಹಾರ್ದಕ್ಕೆ ಎರಡು ಪದಾರ್ಥಗಳು ಅವಶ್ಯ. ಜೀವರುಗಳು ಅನಂತರಾದ್ದರಿಂದ ಅವರಲ್ಲಿ ಸೌಹಾರ್ದ ಬೇಕು. ಅವರಲ್ಲಿ ತಾರತಮ್ಯವಿರುವುದರಿಂದ ಈ ಸ್ನೇಹಕ್ಕೆ ಅವಕಾಶ. ಅದಿಲ್ಲದೆ ಇದೂ ಇಲ್ಲ.

ವಸ್ತುಸ್ಥಿತಿಯನ್ನು ತತ್ವವಿವೇಚನೆಯ ದೃಷ್ಟಿಯಿಂದ ನೋಡಿ, ಅವುಗಳ ಸ್ವಭಾವವನ್ನು ಅರ್ಥ ಮಾಡಿಕೊಂಡು ಅದಕ್ಕಿರುವ ಸಾಧನೆಗಳೇನೆಂಬುದನ್ನು ವಿಚಾರ ಮಾಡುವುದೇ ನಿಜವಾದ ತತ್ವಶಾಸ್ತ್ರದ ಕೆಲಸವೇ ಹೊರತು ನಮ್ಮ ಅನುಮಾನಕ್ಕೆ, ತರ್ಕಸರಣಿಗೆ ಊಹಾ ಪ್ರಪಂಚಕ್ಕೆ ತಕ್ಕಂತೆ ವಸ್ತುಸ್ವಭಾವ ಧರ್ಮಗಳನ್ನೂ ಬೌದ್ಧಿಕವಾಗಿ ಕೆತ್ತಿಸೆದು ಎಲ್ಲದರಲ್ಲೂ ಐಕ್ಯತೆಯನ್ನು ನೋಡುವುದೇ ತರ್ಕಲಾಘವವೆಂದು ಬಗೆದು, ಅವುಗಳನ್ನು ಒಂದುಗೂಡಿಸಿ, ತತ್ವಶಾಸ್ತ್ರದಲ್ಲಿ ದೊಡ್ಡ ಧ್ಯೇಯವನ್ನು ಸಾಧಿಸಿದ್ದೇನೆಂದುಕೊಳ್ಳುವುದು, ಪ್ರಪಂಚಾನುಭವವಿಲ್ಲದ ರಾಜಕುಮಾರ ಹಬ್ಬದಡಿಗೆಯನ್ನುಂಡು ತನ್ನ ಭಾವನೆಗೆ ತಕ್ಕಂತೆ ಸುಂದರ ಕನಸನ್ನು ಕಂಡಂತೆ ಸುಕೋಮಲವಾದೀತೇ ಹೊರತು, ನಿಷ್ಠುರಸತ್ಯವಾಗಲಾರದು. ವಸ್ತುಸ್ವಭಾವ ಪರಿಚಯ ಮಾಡಿಕೊಳ್ಳುವುದು ತತ್ವವೇತ್ತನ ಕಾರ್ಯವೇ ಹೊರತು, ತನ್ನ ಮನ ಬಂದಂತೆ ಜಗತ್ತನ್ನು ಸೃಷ್ಟಿಸಿಕೊಂಡು ಅದೇ ಈ ವಾಸ್ತವಿಕ ಜಗತ್ತೆಂಬುದು ಅವನ ಕಾರ್ಯವಲ್ಲ. ಇದೀಗ ಕಲೆಗಾರನಿಗೆ ಸೇರಿದುದು. ಕಲೆ, ಸಾಹಿತ್ಯ, ಎಷ್ಟು ಮನೋರಂಜಕವೋ ತತ್ವಗಳ ಸುಂದರ 'ಕಲ್ಪನೆ' ಅಷ್ಟೇ ಮನೋರಂಜಕ. ಇದರಿಂದ ಮಾನವ ಸಂಸ್ಕೃತಿಗೆ ಹೆಚ್ಚಿನ ಸಹಾಯವಾಗಲಾರದು. ಜೀವರ ಮತ್ತು ಜಗತ್ತಿನ ಸ್ವಭಾವವನ್ನರಿತು, ಮಾನವರುಗಳಲ್ಲಿನ ಭೇದವನ್ನೂ, ತಾರತಮ್ಯವನ್ನೂ ಮತ್ತು ಒಳಿತು, ಕೆಡಕುಗಳನ್ನೂ ಇದ್ದಂತೆ ನೋಡಿ, ಅದಕ್ಕೆ ಇರುವ ಪರಿಹಾರವನ್ನೂ ಭಾವನಾಪರವಶರಾಗದೇ ಚರ್ಚಿಸುವುದೀಗ ತತ್ವಜ್ಞರ ಕೆಲಸ.

ಜಗತ್ತಿನಲ್ಲಿ, ಮಾನವ ಸಂಸ್ಕೃತಿಯಲ್ಲಿ ಜೀವರುಗಳ 'ಪಾರಮಾರ್ಥಿಕ ಭೇದ,' ತಾರತಮ್ಯ' ಮತ್ತು 'ಗುಣ ವೈಷಮ್ಯ', ಈ ಮೂರು 'ಬೇರ್ಪಡಿಸುವ' ಅಥವಾ ವಿಘಟಕ, ತತ್ವಗಳಾದರೆ ಮಾನವರನ್ನು ಸಂಘಟಿಸುವ, ಸಮನ್ವಯಾತ್ಮಕ ತತ್ವ ಈ ತತ್ವಗಳಿಗಿಂತ ಹೆಚ್ಚು ಪ್ರಧಾನವಾದದ್ದು. ಭಗವಂತ ಸರ್ವೋತ್ತಮ, ಸ್ವತಂತ್ರ, ಗುಣಪೂರ್ಣ, ದೋಷದೂರ ಆದ್ದರಿಂದಲೇ ಪೂರ್ಣ ಎಂಬುವುದೇ ಈ ಪ್ರಧಾನ ತತ್ವ. ಜಗತ್ತಿನ

1. Evil is not merely—a by product of unfavourable circumstances; it is too-wide spread and too deep-seated to admit of any such explanation; so wide spread. so deep-seated that one can only conclude that what the religions have always taught is true, and that evil is endemic in the heart of man.

—God & Evil—C.E.M. Joad.

'ಎಲ್ಲ 'ಧರ್ಮ'ಗಳಲ್ಲೂ ಈ ಭಗವತ್ತತ್ತ್ವಕ್ಕೆ ಪ್ರಾಮುಖ್ಯತೆ ಇದೆ. ಆದರೆ ದ್ವೈತ ಮತದಲ್ಲಿ ಇದರ ಬಗ್ಗೆ ಮಾಡಿರುವ ವಿವೇಚನೆ ಮಾತ್ರ ಅಸಾಧಾರಣವಾದದ್ದು. ಉಳಿದ ದರ್ಶನಗಳಂತೆ ಇಲ್ಲಿ ಭಗವಂತ ಭ್ರಾಂತನಲ್ಲ, ವಂಚಕನೂ ಅಲ್ಲ. ಕೆಲಸಗಾರ ಪದಾರ್ಥಗಳನ್ನು ಸೃಷ್ಟಿಸುವಂತೆ ಜಗತ್ಸೃಷ್ಟಿ ಮಾಡಿದ್ದರಿಂದ ಅವನು ಕೃತಾರ್ಥ ನಾಗಲಿಲ್ಲ. ತಾಯಿ ಮಗನನ್ನು ಪೋಷಿಸುವಂತೆ ಜೀವರುಗಳನ್ನು ಪೋಷಿಸುವುದರಿಂದ ಮಾತ್ರ ಅವನ ಕೆಲಸ ಪೂರೈಸಲಿಲ್ಲ. ಕಷ್ಟದಲ್ಲಿರುವವರನ್ನು ವೈದ್ಯ ರೋಗಿಯನ್ನು ಗುಣಪಡಿಸುವಂತೆ ಕಾಪಾಡುವುದಷ್ಟೇ ಅವನ ಸ್ವಭಾವವೂ ಅಲ್ಲ. ಭಗವಂತ ಜೀವರುಗಳ ಜೀವನಾಡಿ, ಆತನ ಅನಂತ ದಯೆಯಿಂದ ಮಾತ್ರ ಜೀವ ಉಳಿದಿರಬಲ್ಲ, ಅವನು ಉದಾಸೀನನಾದರೆ ಜೀವನ ಅಸ್ತಿತ್ವಕ್ಕೆ ಕುಂದು. ಜೀವನ ಸ್ವಾಭಾವಿಕ ಕ್ರಿಯೆಗಳು ನಡೆಯಬೇಕಾದರೂ ಪರಮಾತ್ಮ ಅಂತರ್ಹಿತನಾಗಿ ಆ ಶಕ್ತಿಯನ್ನು ಪ್ರಚೋದನ ಮಾಡಬೇಕು. ಹೀಗೆ ಅತ ಜಗತ್ತಿನ ಪ್ರಾಣಶಕ್ತಿ ಕ್ರಿಯಾಶಕ್ತಿಯಾಗಿದ್ದಾನೆ. ಹೀಗೆ ಅಂತರ್ಯಾಮಿಯಾಗಿದ್ದು ಜಗತ್ತನ್ನು ನಡೆಸುವುದಲ್ಲದೆ, ಜಗತ್ತಿನ ಅಧೀಶ್ವರನಾಗಿದ್ದು ಜೀವರುಗಳ ಧ್ಯೇಯಸಾಧನೆಗೆ ತಕ್ಕ ಫಲ ಕೊಡುತ್ತಾನೆ. ಹೀಗೆ ಆತ್ಮ (Immanent) ಮತ್ತು ಈಶ (Transcendent) ಈ ಎರಡು ಭಗವಂತನ ಸ್ವಭಾವಕ್ಕೆ ಹೊಂದಿದ್ದು. ಹೀಗಿದ್ದರೂ ಆತ ಮಾತ್ರ ನಿರ್ಲಿಪ್ತ, ಪೂರ್ಣ. ಆ ಪೂರ್ಣನ ಪ್ರತಿಬಿಂಬರು ಜೀವರು. ಅವನು ಎಲ್ಲ ಚೇತನ ವರ್ಗಕ್ಕೂ ಬಿಂಬ ಸ್ವರೂಪಿ. ಸದಾ ದೋಷಗ್ರಸ್ತನಾದ ಮಾನವ ತನ್ನ ಬಿಂಬನಲ್ಲಿ ಶರಣುಹೋಗಿ ಸಾಂತ್ವನೆಯನ್ನು ಪಡೆಯುತ್ತಾನೆ. ಭಗವಂತನ ಮತ್ತು ಜಗತ್ತಿಗೆ ಅವನ ಸಂಬಂಧದ ಇಂತಹ ಸ್ವಾಭಾವಿಕ ಮಧುರ ಚಿತ್ರ ಇನ್ನಾವ ದರ್ಶನಗಳಲ್ಲೂ ಸಿಕ್ಕಲಾರದು.

ಇನ್ನೂ ಇಂತಹ ಭಗವಂತನ ಪ್ರಾಪ್ತಿಗೆ ಅತಿ ಮುಖ್ಯವಾದ ಸಾಧನ ಭಕ್ತಿ. ಭಕ್ತಿ ಭಗವಂತನ ತುಷ್ಟಿಗೆ ಸಾಧನವೆಂದು ಎಷ್ಟೋ ಮತಗಳಲ್ಲಿ ಸಾರಿದೆ. ಆದರೆ ಭಕ್ತಿಯ ನಿಷ್ಕೃಷ್ಟ ಸ್ವರೂಪ ಮಧ್ವಮತದಷ್ಟು ಇನ್ನಾವ ಮತದಲ್ಲೂ ಸ್ಪಷ್ಟವಾಗಿ ನಿರೂಪಿತವಾಗಿಲ್ಲ. ಕೆಲವು ದರ್ಶನಗಳಲ್ಲಂತೂ ಭಕ್ತಿಗೆ ಸ್ಥಾನವೇ ಇಲ್ಲ. ವಸ್ತುವಿನ ನಿಜವಾದ ಜ್ಞಾನವಾದ ಕೂಡಲೆ ಮುಕ್ತಿ ಲಭಿಸುತ್ತದೆ. ಅಥವಾ ವೇದೋಕ್ತ ಪ್ರಕಾರ ಕರ್ಮ ಮಾಡಿದರೆ ಮೋಕ್ಷ ಪ್ರಾಪ್ತಿಯಾಗುತ್ತೆ. ಆದರೆ ಈ ದರ್ಶನಗಳು ಬ್ರಹ್ಮವಿದ್ಯೆಯ ಮುಖ್ಯ ತಿರುಳನ್ನೇ ಮರೆತುಬಿಟ್ಟವು. ಬ್ರಹ್ಮ ಮಹಾಚೇತನ. ಅವನು ನಿರ್ಗುಣ, ನಿರಾಕಾರನಲ್ಲ. ಅಭಾವ ವಸ್ತುವಲ್ಲ. ಅವನು ಅಪ್ರಾಕೃತಸ್ವಾಮಿ. ಅನಂತಕಲ್ಯಾಣಗುಣಪರಿಪೂರ್ಣ. ಜೀವನಿಗೆ ಸುಹೃತ್ತನು. ಇಂತಹ ಸರ್ವೋತ್ಕೃಷ್ಟ ಮೂರ್ತಿಯನ್ನು ಒಲಿಸಲು ಒಲವು ಬೇಕೇ ಹೊರತು, ಇತರ ಸಾಧನಗಳು ಅಪ್ರಯೋಜಕ. ಪರಿಪೂರ್ಣನಾದ ಹರಿಯನ್ನು ದ್ರವ್ಯಾದಿ ಐಹಿಕ ಪದಾರ್ಥಗಳಿಂದ ಒಲಿಸುವುದಂತೂ ಶಕ್ಯವೇ ಅಲ್ಲ. ಅವನ ವಿಷಯಕವಾದ ಜ್ಞಾನ ಸಂಪಾದಿಸಿದ್ದರಿಂದ ಅವನ ಕಾರುಣ್ಯ ದೊರಕಿಸಿದಂತೆ ಆಗಲಾರದು. ಅದಕ್ಕಾಗಿ ಅನವರತ ದೈಹಿಕ ಹಾಗೂ ಮಾನಸಿಕವಾಗಿ ದುಡಿದರೂ ಅವನು ಪ್ರಸನ್ನನಾಗಲಾರ. ಅವನಲ್ಲಿ ಅಗಾಧ ವಿಶ್ವಾಸ ಮೂಡಿದರೆ ಮಾತ್ರ ಅವನು ಅನುಗ್ರಹ ತೋರಬಲ್ಲ. ಅವನಾಗಿ ಒಲಿದರೆ ಒಲಿಯಬೇಕು. ಇನ್ನಾವುದರಿಂದಲೂ ಅವನನ್ನು ಪಡೆಯಲು ಸಾಧ್ಯವಿಲ್ಲ. 'ಯತ್ನಕೆ ಲೇಶ ಒಲಿಯುವನಲ್ಲವೋ' (ಯಮೇವೈಷ ವೃಣುತೇ ತೇನ ಲಭ್ಯಃ). ಅವನಾಗಿ ಅನುಗ್ರಹೋನ್ಮುಖನಾಗಲು ಅವನಲ್ಲಿ ಗಾಢವಾದ ಸ್ನೇಹವೇ ತಕ್ಕ ಸಾಧನೆ. ಇಂತಹ ಗಾಢ ಸ್ನೇಹ ಬೆಳೆಯಲು ಅವನ ಮಹಿಮಾ ವಿಶೇಷವನ್ನು ತಿಳಿಯಬೇಕು. ಇದನ್ನೇ ಆಚಾರ್ಯರು (ಮಹಾತ್ಮ್ಯ ಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ। ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನ ಚಾನ್ಯಥಾ) ಎಂಬ ವಾಕ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

ಇತರ ಕೆಲವು ಮತಗಳಲ್ಲಿದ್ದಂತೆ ನಮ್ಮ ದಾರಾಪುತ್ರಾದಿಗಳಲ್ಲಿ ಮಾಡಿದಂತೆ ಮೂಕ ಸ್ನೇಹವನ್ನು ಭಗವಂತನಲ್ಲಿ ಮಾಡಿ ಅನವರತ ಅವನನ್ನು ಭಜಿಸಿದರೆ ಅದು ಭಕ್ತಿ ಎನಿಸುವುದಿಲ್ಲ. ಭಕ್ತಿಗೆ ಜ್ಞಾನದ ಸಂಪೂರ್ಣ ಬೆಂಬಲ ಬೇಕು. ವೇದಾದಿಗಳಲ್ಲಿ ಉಕ್ತವಾದ ನಿಷ್ಕೃಷ್ಟ ತತ್ತ್ವವನ್ನು ಭಗವಂತನ ಮಹಿಮೆ

ಗಳನ್ನು ಮೀಮಾಂಸೆಯಿಂದ ಅರಿತ ಜ್ಞಾನಕ್ಕೆ ಪ್ರಬಲತರವಾದ ವಿಶ್ವಾಸ ಬೆರತು ಭಕ್ತಿಯೆಂಬ ಪಾಕ ಉದಯವಾಗಬೇಕು. ಇಂತಹ ನಿಷ್ಕೃಷ್ಟ ಜ್ಞಾನಕ್ಕೆ ಸದ್ವಿಚಾರದ ಜೊತೆಗೆ ಐಹಿಕ ವಿಷಯಗಳಲ್ಲಿ ಅಸ್ವಾರಸ್ಯ ಭಾವದಿಂದ ಉಂಟಾದ ವೈರಾಗ್ಯ, ಅಂತಃಕರಣನೈರ್ಮಲ್ಯಕ್ಕೆ ಕಾರಣವಾದ ಶಾಸ್ತ್ರೋಕ್ತವಾದ ನಿಷ್ಕಾಮ ಕರ್ಮಾನುಷ್ಠಾನ ಮತ್ತು ಶಮದಮಾದಿ ಸಂಪತ್ತು ಇವು ಅತ್ಯವಶ್ಯಕವಾದ ಸಾಧನೆಗಳು. ಹೀಗೆ ಕರ್ಮ, ಜ್ಞಾನ, ವೈರಾಗ್ಯ ಮತ್ತು ಭಕ್ತಿ ಇವುಗಳ ಸುಂದರ ಹಾಗೂ ಉಚಿತ ಸಮನ್ವಯ ದ್ವೈತ ಸಿದ್ಧಾಂತದಲ್ಲಿ ಮಾತ್ರ ಕಂಡುಬರುವ ಅಂಶ. ಇದು ನಿಜವಾದ ಸರ್ವತೋಮುಖವಾದ ತತ್ತ್ವ ಬೋಧಕವಲ್ಲದೆ ಇತರ ದರ್ಶನ ಗಳಲ್ಲಿ ಇವುಗಳಲ್ಲಿ ಕೆಲಕೆಲ ಅಂಶಗಳನ್ನು ಮಾತ್ರ ಪರಿಗಣಿಸಿ ಅದಕ್ಕೆ ಸಲ್ಲದ ಮನ್ನಣೆ ಕೊಟ್ಟಿರುವುದರಿಂದ ಅವು ಅಪಸಿದ್ಧಾಂತವೆನಿಸಿದವು. ಮನುಷ್ಯನ ಸಾಧನೆಗೆ ಕರ್ಮ, ಜ್ಞಾನ, ಭಕ್ತಿ ಇವು ಯಾವ ಯಾವ ಹಂತದಲ್ಲಿ ಎಷ್ಟರಮಟ್ಟಿನ ಸಾಧನೆಗಳಾಗುವುವೆಂಬುದು ಈ ಸಿದ್ಧಾಂತದಲ್ಲಿ ಮಾತ್ರ ಸ್ಪಷ್ಟವಾಗಿದೆ. ಆದ್ದರಿಂದ ಇದು ವಿಷಯಜಿಜ್ಞಾಸೆಗೆ ಎಡೆಕೊಡುವುದಲ್ಲದೆ, ಅನುಷ್ಠಾನಕ್ಕೂ ಅನುಕೂಲವಾಗಿದೆ. ಮೆದುಳಿನ ಹಸಿವು ಹಿಂಗಿಸಿದಂತೆ ಕರುಳಿಗೂ ತಂಪೆರೆಯುತ್ತದೆ. ಯುಕ್ತಿಯುಕ್ತವೂ ಆಗಿದೆ. ಅನುಭವಕ್ಕೆ ಸಮಂಜಸವೂ ಆಗಿದೆ. ತತ್ತ್ವಜಿಜ್ಞಾಸು, ಪಂಡಿತ, ಭಕ್ತ, ಯೋಗಿ, ವಿರಕ್ತ, ಭಾಗವತ, ಕಾರ್ಯತತ್ಪರ, ಅವಧೂತ—ಎಲ್ಲರಿಗೂ ಈ ಸಿದ್ಧಾಂತವೇ ತಾರಕ. ಲೌಕಿಕ ಜೀವನದಲ್ಲಿ, ರಾಜಕಾರ್ಯದಲ್ಲಿ, ದಂಡನೀತಿಯಲ್ಲಿ, ವ್ಯಾಪಾರೋದ್ಯೋಗ ದಲ್ಲಿ ಸೌಮನಸ್ಯ, ಶಾಂತಿ, ಸೌಖ್ಯಗಳುಂಟುಮಾಡಲು ನಿರಾಶಾಭಾವನೆಯನ್ನು ನೀಗಿಸಿ, ಆಸೆ ಭರವಸೆಗಳನ್ನು ನೀಡಲು, ಅತ್ಯಾಶೆಯನ್ನು ಹೋಗಲಾಡಿಸಿ, ಅಲ್ಪ ಸಂತುಷ್ಟಿಯನ್ನು ತಂದೊಡ್ಡಲು, ಸ್ವಾರ್ಥವನ್ನು ಳಿಸಿ ಪರೋಪಕಾರ ಬುದ್ಧಿಯನ್ನು ಅಭಿವೃದ್ಧಿಗೊಳಿಸಲು ಈ ಸಿದ್ಧಾಂತವೇ ನಿಜವಾದ ಪ್ರೇರಕಶಕ್ತಿಯಾಗಬಲ್ಲುದು. ಜಗತ್ತಿನ ಕಲ್ಯಾಣಕ್ಕೆ ಮತ್ತು ಶಾಂತಿಗೆ ದಾರಿ ತೋರಲು ಇದೊಂದೇ ಸರಿಯಾದ ಕೈದೀವಿಗೆ. ಇಂತಹ ಅಮೂಲ್ಯ ದರ್ಶನವನ್ನು ಉಪೇಕ್ಷೆ ಮಾಡುವುದು ಜನಾಂಗದ ಮೌಢ್ಯತೆಯನ್ನು ತೋರಿಸುವುದೇ ಹೊರತು ಅನ್ಯಥಾ ಅಲ್ಲ.

ಆಚಾರ್ಯರು ತಮ್ಮ ಸಿದ್ಧಾಂತದ ಮೂಲಕ ಮಾನವ ಸಂಸ್ಕೃತಿಗೆ ಒಂದು ಅಮೂಲ್ಯ ಸಂದೇಶ ವನ್ನಿತ್ತಿದ್ದಾರೆ. ಇದು ಅನಂತಕಾಲದವರೆಗೂ ಜಗತ್ತಿನ ಕಲ್ಯಾಣಕ್ಕೆ ಕಾರಣವಾಗುತ್ತದೆ. ಜಗತ್ತಿನ ಆಗುಹೋಗುಗಳನ್ನೂ, ಮಾನವನ ಸ್ವಭಾವವನ್ನೂ, ಅವನ ಸುಖ ಶಾಂತಿಗಳ ರೂಪರೇಷೆಗಳನ್ನೂ, ಜಗತ್ತಿಗೆ ಚೈತನ್ಯಪ್ರದನಾದ ಸರ್ವೋತ್ತಮನಾದ ಶ್ರೀಹರಿಯ ಕಾರುಣ್ಯಾದಿ ಮಹಾ ಗುಣಗಳನ್ನು ಅರಿತ ಲೋಕಪ್ರಾಣ ರಾದ ಸರ್ವಜ್ಞರು ಮಾನವನ ಉದ್ಧಾರಕ್ಕೆ ನಿಷ್ಕೃಷ್ಟವಾದ ಮಾರ್ಗವನ್ನು ಹಾಕಿಕೊಟ್ಟಿದ್ದಾರೆ. ಸಾಧಕರು, ವಿಚಾರವಂತರು ಅತ್ತಕಡೆ ಲಕ್ಷ್ಯ ಕೊಟ್ಟು ಆ ಮಾರ್ಗದತ್ತ ಸಾಗಿದರೆ ವೈಯಕ್ತಿಕ ಕಲ್ಯಾಣವಾಗುವುದರೊಂದಿಗೆ ಸಮಾಜದ, ಇಡೀ ಮಾನವ ಜನಾಂಗದ ಕಲ್ಯಾಣವಾಗುವುದರಲ್ಲಿ ಏನೂ ಸಂದೇಹವಿಲ್ಲ. ಆಚಾರ್ಯರ ಉಪದೇಶದ ಸಾರವನ್ನು ಹೀಗೆ ಸಂಗ್ರಹಿಸಬಹುದು :

ನಮಗೆ ತಿಳಿವು ಮೂಡಿದ ಮೇಲೆ ನಮ್ಮ ಪ್ರಗತಿಗೆ, ನಮ್ಮ ಸುಖಕ್ಕೆ ದಾರಿ ಯಾವುದೆಂಬುದು ತಿಳಿಯದೇ ದಿಙ್ಮೂಢನಾಗಬೇಕಾದ ಕಾರಣವೇನೂ ಇಲ್ಲ. ಮೊಟ್ಟಮೊದಲಿಗೆ ಶಾಸ್ತ್ರಗಳು ನಿಜವಾದ ಉದ್ಧಾರ ಮಾರ್ಗ ವನ್ನು ತೋರಿಸುವುವೆಂಬ ಅಚಲ ಶ್ರದ್ಧೆಯಿಂದ, ಶಾಸ್ತ್ರವಿಹಿತವಾದ ಸ್ವವಿಹಿತ ವೃತ್ತಿಯನ್ನು ಕಾಲಾನುಗುಣ ವಾಗಿ ಪರಮಾತ್ಮನ ಸೇವೆಯೆಂಬ ಬುದ್ಧಿಯಿಂದ ಫಲಾಪೇಕ್ಷೆಯಿಲ್ಲದೆ ಮಾಡಬೇಕು. ಮತ್ತು ಅದರಿಂದ ಆಗುವ ಫಲಾಫಲಗಳನ್ನು ಸಂತೋಷದಿಂದ ಭೋಗ ಮಾಡಬೇಕು. ಇದೇ ಗೀತೆಯ ಮುಖ್ಯ ಸಂದೇಶ. ಉಪನಿಷತ್ತಿನ ಆಣತಿ. ಇದನ್ನೇ ಆಚಾರ್ಯರು ಸಂಗ್ರಹವಾಗಿ 'ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ ಹರಿಪಾದ ವಿನಮ್ರಧಿಯಾ ಸತತಂ' ಎನ್ನುವ ವಾಕ್ಯದಲ್ಲಿ ಹೇಳಿದ್ದಾರೆ. ಇದರಲ್ಲಿ ಅತ್ಯಾಶೆಗಾಗಲಿ, ನಿರಾಶಾಭಾವನೆ ಗಾಗಲೀ ಅವಕಾಶವಿಲ್ಲ. ತನ್ನ ಕರ್ತವ್ಯ ಕರ್ಮಗಳಲ್ಲಿ ಉದಾಸೀನ ಬುದ್ಧಿಯುಂಟಾಗಲು ಅವಕಾಶವಿಲ್ಲ.

ಫಲಿತಾಂಶದ ಬಗೆಗೆ ಹೆಚ್ಚು ಆಸಕ್ತಿ ಇಲ್ಲ. ಇದೀಗ ಪ್ರಪಂಚದ ಸ್ವಭಾವ. ಪ್ರತಿಯೊಂದು ಕಾರ್ಯಕ್ಕೂ ನಮಗೆ ತಿಳಿದ ಕಾರಣಗಳೊಂದಿಗೆ ತಿಳಿಯದ ಕಾರಣವೂ ಇದೆ. ಇದೇ ಅದೃಷ್ಟ. ಇದರ ಕ್ರಿಯೆ ನಮಗೆ ತಿಳಿಯುವುದಿಲ್ಲ. ತಿಳಿದ ಕಾರಣದಿಂದ ತಿಳಿದ ಕಾರ್ಯವಾಗುವುದರ ಬದಲು ಅದಕ್ಕೆ ವಿಪರೀತವಾಗಿ ಆಗಬಹುದು. ನಾವು ನಿರೀಕ್ಷಿಸಿದ್ದಕ್ಕಿಂತ ಉತ್ತಮ ಫಲಗಳು ದೊರೆಯಬಹುದು. ಕೇವಲ ವಿರೋಧ ಫಲಗಳೂ ಆಗಬಹುದು. ಇವನ್ನೆಲ್ಲ ಸರಿಪಡಿಸಿ ನಮ್ಮ ಜನತೆಗೆ ತಕ್ಕಂತೆ ವ್ಯವಸ್ಥೆಗೊಳಿಸುತ್ತೇನೆಂದು ಮಾನವ ವೃಥಾ ಹೆಣಗುತ್ತಾನೆ. ಇದರಿಂದ ವಿಶೇಷ ಅಶಾಂತಿ ಮೂಡುತ್ತದೆ. ಇದರ ಬದಲು ಇದ್ದುದನ್ನು ಇದ್ದಂತೆಯೇ ಗ್ರಹಿಸಿ ಅವರಲ್ಲಿ ನಮ್ಮ ಕರ್ತವ್ಯವನ್ನು ಅರಿತು, ಅವನ್ನು ಕ್ರಮವಾಗಿ ನೆರವೇರಿಸುವುದಷ್ಟನ್ನೇ ನಾವು ಅಭ್ಯಸಿಸಬೇಕು. ಇದೀಗ ಯೋಧನ ತತ್ತ್ವ. ಅವನಿಗೆ ತನ್ನ ಸೈನ್ಯದ ಜಯಾಪಜಯಗಳ ಅರಿವಿಲ್ಲ. ಅದರ ಬಗ್ಗೆ ಅವನಿಗೆ ಹೆಚ್ಚಿನ ಲಕ್ಷ್ಯವೂ ಇಲ್ಲ. ಆದರೆ ತನಗೆ ನಿರ್ದಿಷ್ಟವಾದ ಕೆಲಸ ನೆರವೇರಿಸುವುದರಲ್ಲಿ ಅವನು ಬದ್ಧಕಂಕಣ. ಇಂತಹ ಶಿಸ್ತು, ಸಂಯಮ, ಫಲಾನಾಸಕ್ತಿ, ನಮ್ಮ ನಿತ್ಯ ನೈಮಿತ್ತಿಕ ಕರ್ಮದಲ್ಲಿ, ಸಾಮಾಜಿಕ ಚಟುವಟಿಕೆಗಳಲ್ಲಿ, ರಾಜ್ಯಾಡಳಿತದಲ್ಲಿ ಬೆಳೆಯಬೇಕು. ಅದು ಬೆಳೆದಷ್ಟೂ ದ್ವೇಷಾಸೂಯೆಗಳೂ, ಸ್ವಾರ್ಥವೂ, ಕಡಿಮೆಯಾಗುವುದು. ಸ್ನೇಹ ಬೆಳೆಯುವುದು.

ಈ ಮುಖ್ಯ ತತ್ತ್ವಕ್ಕೆ ಹಿನ್ನೆಲೆಯೇ ಪರಮಾತ್ಮನಲ್ಲಿ ರತಿ–ಅವನೇ ಸರ್ವೋತ್ತಮ, ಸರ್ವರಿಂದಲೂ ಆರಾಧ್ಯ, ಅಖಿಲ ಗುರು, ಜಗತ್ತಿನ ಮಾತಾಪಿತೃ ಮತ್ತು ಜಗತ್ತಿನ ಧ್ಯೇಯ. ಇದು ಮಾನವ ಬೆಲೆ ಕೊಡಬೇಕಾದದ್ದಕ್ಕೆ ಅಳತೆಗೋಲು. ಸರ್ವರೂ ಸುಖವಾಗಿರಬೇಕು; ಐಹಿಕ ಸುಖವೇ ಸರ್ವಸ್ವವೆಂದು ತಿಳಿದು ಅದಕ್ಕೆ ಎಷ್ಟೇ ಶ್ರಮಿಸಿದರೂ ಅದು ವ್ಯರ್ಥವಾಗುತ್ತೆ. ನಾವೊಂದು ಬಗೆದರೆ ದೈವವೊಂದು ಬಗೆಯುತ್ತದೆ. ಅಲ್ಲದೆ ಯಾವುದೇ ಸುಖವಾಗಲಿ ಅದಕ್ಕೆ ಸ್ನೇಹ ಮೂಲ. ವಿಷಯಗಳಲ್ಲಿ ಗಾಢವಾದ ಸ್ನೇಹವಿದ್ದಲ್ಲಿ ಇಂದ್ರಿಯ ಸುಖದಲ್ಲಿ ಆಸಕ್ತಿ. ಆದ್ದರಿಂದ ಇಂತಹ ಸ್ನೇಹವನ್ನು, ಬಲವನ್ನು ಅಶೋಷ್ಯ ಜಲಾಶಯದಂತಿರುವ ಭಗವಂತನ ಕಡೆ ಹರಿಸಿದರೆ ಆಗ ಅದಕ್ಕೆ ಚ್ಯುತಿಯೇ ಇಲ್ಲದೆ ಶಾಶ್ವತ ಶಾಂತಿಗೆ ದಾರಿಯಾಗುತ್ತದೆ. ಇದರಿಂದ ಮಾನವ ಜನಾಂಗ ಪುನೀತವಾಗುತ್ತೆ. ಈ ಪರಮಾತ್ಮತತ್ತ್ವಕ್ಕಿಂತ ಹೆಚ್ಚು ಪ್ರೀತ್ಯಾಸ್ಪದ ವಸ್ತುವಾಗಲೀ, ಶ್ರೇಷ್ಠವಾದ ವಸ್ತುವಾಗಲೀ ಇನ್ನಾವುದೂ ಇಲ್ಲ. ಆದ್ದರಿಂದ ಎಲ್ಲ ಕ್ರಿಯೆ, ಜ್ಞಾನ, ಭಕ್ತಿ ಅವನ ಕಡೆ ಹರಿಯಬೇಕು. ಲೌಕಿಕವಾದ ಕ್ರಿಯೆಯೂ ಅವನ ಸೇವಾರೂಪವನ್ನು ತಾಳಬೇಕು. ಇದೇ ಮುಖ್ಯ ರಹಸ್ಯ 'ಹರಿರೇವ ಪರೋ ಹರಿರೇವ ಗುರುಃ ಹರಿರೇವ ಜಗತ್ಪಿತೃಮಾತೃಗತಿಃ | ನ ತತೋಽಸ್ತ್ಯಪರಂ ಜಗತೀಡ್ಯತಮಂ ಪರಮಾತ್ಪರತಃ ಪುರುಷೋತ್ತಮತಃ |' ಎಂಬ ವಾಕ್ಯದಿಂದ ಆಚಾರ್ಯರು ಈ ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ಸಕಲ ಶಾಸ್ತ್ರಾರ್ಥವೂ, ವೇದಾದಿಗಳರ್ಥವೂ ಇದೇ, 'ಆಲೋಡ್ಯಸರ್ವಶಾಸ್ತ್ರಾಣಿ' 'ವೇದೇ ರಾಮಾಯಣೇ ಚೈವ' ಇತ್ಯಾದಿ ವಾಕ್ಯಗಳಲ್ಲಿ ಹೇಳಿರುವ ಅಂಶವೇ ಇದು. ಇದೇ ಎಲ್ಲ ಸಮೀಚೀನ ದರ್ಶನಗಳೂ ಅತ್ಯಾವಶ್ಯವಾಗಿ ಒಪ್ಪಬೇಕಾದ ಮುಖ್ಯ ತತ್ತ್ವ. ವಿಚಾರವಂತರಿಗೂ ಇದೇ ಸೂಕ್ತಪರಿಹಾರ. ಇದನ್ನೂ ಆಚಾರ್ಯರು 'ಅಶೇಷಗುಣಪೂರ್ಣತ್ವಂ ಸರ್ವದೋಷ ಸಮುಜ್ಝಿತಿಃ | ವಿಷ್ಣೋರನ್ಯಚ್ಛತತ್ತಂತ್ರಂ ಇತಿ ಸಮ್ಯಗ್ವಿನಿರ್ಣಯಃ' ಇತ್ಯಾದಿ ಅನುವ್ಯಾಖ್ಯಾನ ವಾಕ್ಯಗಳಿಂದ ಪ್ರಪಂಚನಮಾಡಿದ್ದಾರೆ.

ಈ ಪರಮ ಮುಖ್ಯ ಸಿದ್ಧಾಂತದಿಂದ ಹೊರಡುವ ಇನ್ನೊಂದು ಅಂಶವೆಂದರೆ ಜಗತ್ತಿನ ಅವ್ಯವಸ್ಥೆಯನ್ನು ಮುಂದಿಟ್ಟು ಮಾಡಿಕೊಂಡು, ಪರಮಾತ್ಮನೇ ಧ್ಯೇಯವೆಂದು ತಿಳಿದಮೇಲೆ ಜಗತ್ತಿನ ಬಗ್ಗೆ ತೀವ್ರ ಆಸಕ್ತಿಯನ್ನು ಬಿಟ್ಟುಬಿಡಬೇಕು. ಮತ್ತು ಚೇತನವ್ಯಾಪಾರವೆಲ್ಲಾ ಆ ಪರಮಾತ್ಮನನ್ನು ಪಡೆಯುವ ಕಡೆ ಸಾಗಬೇಕು. ಈ ದೊಡ್ಡ ಉದ್ಯಮ ಎಲ್ಲರಿಂದಲೂ ಶಕ್ಯವಲ್ಲವೆಂದು ಹಿಂಜರಿಯುವ ಅವಶ್ಯಕತೆ ಇಲ್ಲ. ಈ ಬಗೆಗೆ ಮಾಡುವ ಪ್ರಯತ್ನವೂ ವ್ಯರ್ಥವಾಗಲಾರದು. ಅದರಲ್ಲಿ ಅಯಶಸ್ವಿಯಾದರೆ ಅದರಿಂದ ಹಾನಿಯೇನೂ ಇಲ್ಲ. ಇದರಲ್ಲಿ ಸ್ವಲ್ಪ ಯಶಸ್ವಿಯಾದರೂ ಅದು ಮಹಾ ಫಲಪ್ರದವಾಗುತ್ತದೆ. 'ನೇಹಾಭಿಕ್ರಮ-

ನಾಶೋಽಸ್ತಿ ಪ್ರತ್ಯವಾಯೋ ನವಿದ್ಯತೇ । ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇಮಹತೋ ಭಯಾತ್' ಎಂಬ ವಾಕ್ಯದಲ್ಲಿ ಪರಮಾತ್ಮ ನೊಂದ ಹೃದಯಿಗೆ ಇದೇ ಉಪದೇಶಮಾಡುತ್ತಾನೆ. ಆಚಾರ್ಯರು ಈ ಅಂಶವನ್ನೇ 'ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರು ಮಾನಸಮೀಶಪದೇ । ಯತತೋಽಪಿ ಹರೇಃ ಪದಸಂ ಸ್ಮರಣೇ ಸಕಲಂ ಹ್ಯಘಮಾಶು ಲಯಂ ವ್ರಜತಿ। ಸ್ಮರತಸ್ತು ವಿಮುಕ್ತಿಪದಂ ಪರಮಂ ಸ್ಫುಟಮೇಷ್ಯತಿ ತತ್ಕಿಮಪಾ-ಕ್ರಿಯತೇ ।' ಎಂಬ ಅಮೃತವಾಣಿಯಿಂದ ಜಗತ್ತಿಗೆ ಬೀರಿದ್ದಾರೆ.

ಇಂತಹ ಜೀವನ ತತ್ತ್ವಾನುಷ್ಠಾನದಲ್ಲಿ, ಪರಸ್ಪರ ಹಿಂಸೆ, ದ್ವೇಷಾಸೂಯೆಗಳಿಲ್ಲ, ಭಿನ್ನಾಭಿಪ್ರಾಯಕ್ಕೆ ಇದರಲ್ಲಿ ಅವಕಾಶವಿಲ್ಲ. ಸ್ವಾರ್ಥದ ಸುಳಿವಿಲ್ಲ. ಬಹುಜನ ಕ್ಷೇಮಕ್ಕೆ ಅಲ್ಪ ಜನರ ದಬ್ಬಾಳಿಕೆ ಇಲ್ಲ. ಅಸಂತುಷ್ಟಿ ಇಲ್ಲ, ಭಯವಿಲ್ಲ, ಇದೇ 'ಧರ್ಮ'ದ ಮುಖ್ಯ ತಾತ್ಪರ್ಯ.

ಧರ್ಮ ಮಾನವ ಜೀವನದ, ಮಾನವ ಸಂಸ್ಕೃತಿಯ ಹಾಸುಹೊಕ್ಕಾಗಬೇಕೆಂಬುದು ಈ ದೃಷ್ಟಿಯಿಂದ. ಇದು ಸರ್ವಸಮತಾತತ್ತ್ವ, ಪ್ರಜಾಪ್ರಭುತ್ವತತ್ವಕ್ಕಿಂತಲೂ ಶ್ರೇಷ್ಠವಾದದ್ದು. ಶ್ರೇಯ ಮತ್ತು ಪ್ರೇಯ ಇವೆರಡಕ್ಕೂ ಇದೇ ಮಾರ್ಗ. ವಿಜ್ಞಾನ ನೀಡುವ ಜ್ಞಾನಕ್ಕಿಂತಲೂ ಇದು ಉತ್ಕೃಷ್ಟವಾದ ಜ್ಞಾನ. ಮಾನವ ಹೃದಯದಲ್ಲಡಗಿದ ಸ್ನೇಹಕ್ಕೆ ಇದು ತಕ್ಕ ಆಶ್ರಯಸ್ಥಾನ. ಇದೇ ಭಾರತದ ಆರ್ಯಸಂಸ್ಕೃತಿಯ ರಹಸ್ಯ. ಇದಿಲ್ಲದೆ ಹೊರಗಿನ ನಿಯಮಾವಳಿಯಿಂದ, ಕಾನೂನು ಕಾಯಿದೆಗಳಿಂದ, ಎಲ್ಲರ ಆಶೋತ್ತರಗಳೂ ಒಂದೇ ಎಂಬ ಕುರುಡು ಭಾವನೆಯಿಂದ, ಐಹಿಕ ಸುಖೋಪಭೋಗಗಳೇ ಅಂತಿಮವೆಂಬ ಅಜ್ಞಾನದಿಂದ, ಹೊರಹೊರಟ ಯಾವುದೇ ತತ್ತ್ವವಾಗಲಿ ಮಾನವ ಕಲ್ಯಾಣಕ್ಕೆ ಕಾರಣವಾಗುವುದಿಲ್ಲ. ಇದೇ ಮಾರ್ಗದಲ್ಲಿ ಸಾಗಿ ವಿನಾಶ ವನ್ನು ತಂದುಕೊಳ್ಳುವುದಕ್ಕೆ ಮೊದಲು, ವಿಚಾರವಂತರು, ಲೋಕಹಿತೈಷಿಗಳು ಆಚಾರ್ಯರ ಈ ವಾಕ್ಯಗಳನ್ನು ಲಕ್ಷ್ಯಕೊಟ್ಟು ವಿಚಾರಮಾಡಲಿ.

'ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ ಹರಿಪಾದವಿನಮ್ರಧಿಯಾ ಸತತಂ ।
ಹರಿರೇವ ಪರೋ ಹರಿರೇವ ಗುರುರ್ಹರಿರೇವ ಜಗತ್ಪಿತೃಮಾತೃಗತಿಃ ॥
ನ ತತೋಽಸ್ತ್ಯಪರಂ ಜಗತೀಡ್ಯತಮಂ ಪರಮಾತ್ಪರತಃ ಪುರುಷೋತ್ತಮತಃ ।
ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರು ಮಾನಸಮೀಶಪದೇ ॥
ಯತತೋಽಪಿ ಹರೇಃ ಪದಸಂಸ್ಮರಣೇ ಸಕಲಂ ಹ್ಯಘಮಾಶು ಲಯಂ ವ್ರಜತಿ ।
ಸ್ಮರತಸ್ತು ವಿಮುಕ್ತಿಪದಂ ಪರಮಂ ಸ್ಫುಟಮೇಷ್ಯತಿ ತತ್ಕಿಮಪಾಕ್ರಿಯತೇ ॥